|| ಶ್ರೀಃ ||

# ಚಂದ್ರನ ಸಾಕ್ಷಿ



ಲೇಖಕರು:
ಬಾಬು ಅತುಲಚಂದ್ರ, ಮಣ್ಣಿನ ಗಡಿಗೆ, ಪ್ರೇಮದ ಹುಚ್ಚಿ, ಕೃಷ್ಣ-ಲೀಲೆ
ಮೊದಲಾದುವುಗಳ ಲೇಖಕ ಮತ್ತು 'ಶ್ರೀಕೃಷ್ಣಸಂದೇಶ' ಸಂಪಾದಕರಾದ

**ಮುದ್ರಾಡಿ ಜನಾರ್ದನಾಚಾರ್ಯ, ಉಡುಪಿ**

ಅಗೋಸ್ತು ೧೯೩೭

**ಬೆಲೆ: ೦—೨—೬**

# ಪ್ರಸ್ತಾವನೆ

ಸಮಾಜದಲ್ಲಿ ನೀತಿಗಳನ್ನು ಪ್ರಚಾರಗೊಳಿಸಲು ಸಾಹಿತ್ಯಗಳಲ್ಲೆಲ್ಲಾ ಸುಲಭಗಳಾದ ಕಥಾಗ್ರಂಥಗಳು ಹೆಚ್ಚಿನ ಪರಿಣಾಮಕಾರಿಗಳಾಗುತ್ತವೆ. ಹಾಗೂ ಕಥೆಗಳನ್ನು ಮನಸ್ಸಿಟ್ಟು ಓದುವುದರಿಂದ ಸಾಂಸಾರಿಕ ಜೀವನ, ನಡೆ ನುಡಿಗಳೇ ಮೊದಲಾದುವಲ್ಲಿ ವ್ಯವಹಾರ ಜ್ಞಾನವು ಬಳೆಯುವುದಲ್ಲದೆ, ತಕ್ಕಷ್ಟು ಭಾಷಾ ಜ್ಞಾನವೂ, ಬೇಸರಗೊಂಡಿರುವ ಮನಸ್ಸಿಗೊಂದು ವಿನೋದವೂ ಉಂಟಾಗುವುದು. ಈ ದೃಷ್ಟಿಯಿಂದ ನಮ್ಮ ವಿವಿಧ ಲೇಖನಗಳಲ್ಲಿ ಕೆಲವು ಕಥಾರೂಪ ಲೇಖನಗಳನ್ನೂ ಪ್ರಕಟಿಸಬೇಕೆಂದು ನಮಗೆ ಮೊದಲಿನಿಂದಲೂ ಕುತೂಹಲವಿದೆ.

ಅಂತಹವುಗಳಲ್ಲಿ ಇದೊಂದು. ಕಥೆಯು ಚಿಕ್ಕದಾದರೂ ಹಲವು ನೀತಿಗಳನ್ನು ಬೋಧಿಸತಕ್ಕದಾಗಿದೆ. ಇಂತಹ ಘಟನೆಯೊಂದು ನಿಜವಾಗಿಯೇ ಯಾವಾಗಲೋ ಒಮ್ಮೆ ನಡೆದೂ ಇದೆಯೆಂದು ನಾವು ಕೇಳಿರುವ ಸಂಗತಿಯೊಂದನ್ನು ಆಧಾರವಾಗಿಟ್ಟುಕೊಂಡು ಈ ಕಥೆಯನ್ನು ಬರೆದಿರುವೆವು. ವಾಚಕರು ಇದರಿಂದ ಸ್ವಲ್ಪವಾದರೂ ನೀತಿಯನ್ನು ಕಂಡುಕೊಂಡಲ್ಲಿ ನಮ್ಮ ಶ್ರಮವು ಸಾರ್ಥಕವಾಯಿತೆಂದೆಣಿಸುವೆವು.

**ಉಡುಪಿ.**
30—7—'36

ಮುದ್ರಾಡಿ ಜನಾರ್ದನಾಚಾರ್ಯ.

# ಚಂದ್ರನ ಸಾಕ್ಷಿ



त्रिभिर्वर्षैस्त्रिभिर्मासैस्त्रिभिः पक्षैस्त्रिभिर्दिनैः
अत्युत्कटैः पुण्यपापैरिहैव फलमश्नुते ॥

## ಮೊದಲನೆಯ ಪರಿಚ್ಛೇದ

"ಹೀಗೆಲ್ಲಾ ಆಗುವುದೆಂದು ಯಾರು ತಿಳಿದಿದ್ದರು! ತಿಳಿದಿದ್ದರೂ ಮನುಷ್ಯನು ಮೋಹವನ್ನು ಜೈಸಬಲ್ಲನೇ! ಹೆಣ್ಣು-ಹೊನ್ನು-ಮಣ್ಣುಗಳಿಂದಾಗಿ ಮನುಷ್ಯನು ಎಷ್ಟೆಷ್ಟು ಅನರ್ಥಗಳನ್ನು ತಂದುಕೊಳ್ಳುತ್ತಿರುವನು! ಅವುಗಳ ಮೋಹಕ್ಕೆ ಬಲಿಯಾದವನ ವಿಚಾರ ಶಕ್ತಿಯೇ ನಾಶವಾಗಿ ಬಿಡುವುದಲ್ಲ! ಹೇ ದೇವಾ! ನಾನೆಂತಹ ದ್ರೋಹಿಯು! ದೇವಾ! ನನ್ನ ದ್ರೋಹಕ್ಕೆ ತಕ್ಕ ಪ್ರಾಯಶ್ಚಿತ್ತವನ್ನೇ ವಿಧಿಸಿದೆಯಲ್ಲವೇ? ನಿನ್ನ ಕಣ್ಣನ್ನು ವಂಚಿಸುವವ ನಾವನು? ಅಥವಾ "ಮಾಡಿದ ಪಾಪಕ್ಕೆ ಮನವೇ ಸಾಕ್ಷಿ" ಎನ್ನುವರಲ್ಲ! ಹೇ ಪಾಪಿಯೇ! ನಿನ್ನ ಕರ್ಮವನ್ನು ನೀನೇ ಉಣಬೇಡವೇ? ನಿನಗಿನ್ನು ನಿಸ್ತಾರವೆಲ್ಲಿ? ನಿನ್ನನ್ನು ಕೇಳುವ ರಾರು? ಕೇಳುವುದರಿಂದ ಪ್ರಯೋಜನವೇನು? ಸರ್ವನಾಶದ ದ್ವಾರದಲ್ಲಿ ಕುಳಿತಿರುವ ನಿನ್ನನ್ನು ಯಾರು ಏತಕ್ಕಾಗಿ ವಿಚಾರಮಾಡಬೇಕು?

ಆದರೂ ನನ್ನನ್ನು ವಿಚಾರಿಸಿಕೊಳ್ಳಿರಿ. ನನ್ನನ್ನು ನೋಡಿ ಮರೆಯಲಿ. ಇನ್ನು ಮುಂದೆ ದ್ರೋಹವನ್ನು ಮಾಡುವವರು ನನ್ನನ್ನು ನೋಡಿ, ನನ್ನೀ ಕರ್ಮಕಥೆಯನ್ನು ಕೇಳಿ ಮರೆಯಲಿ. ದ್ರೋಹವೆಂದರೆ ಮಿತ್ರದ್ರೋಹ. ಇದಕ್ಕಿಂತ ಮಿಕ್ಕಿದ ದ್ರೋಹವಿಲ್ಲವೆನ್ನುವ ರಲ್ಲವೆ? ಅಹುದು, ನನ್ನಂತಹ ದ್ರೋಹಿಯು ಬೇರೊಬ್ಬನಿರಲಾರನು. ಅಂತಹ ನನ್ನ ಪಾಪಿಯ ಚರಿತ್ರೆಯನ್ನೊಮ್ಮೆ ಕೇಳಿ ಎಲ್ಲರೂ ಜಾಗೃತಿಗೊಳ್ಳಲಿ.

ನನಗಿನ್ನೇತರ ಮುಚ್ಚುಮರೆ? ಮೃತ್ಯುಮುಖದಲ್ಲಿರುವ ನನಗಿನ್ನೇತರ ಅಂಜಿಕೆ? ಮುಚ್ಚಿಟ್ಟು ಆದುದೇನು? ಯಾರ ಕಣ್ಣನ್ನು ಮುಚ್ಚಲಿ? ಸೂರ್ಯ-ಚಂದ್ರರಿಗೆ ಆವುದನ್ನು ಮುಚ್ಚಲಿ? ವಾಯ್ವಗ್ನಿದೇವತೆಗಳಿಗಾವುದನ್ನು ಮುಚ್ಚಲಿ? ಭೂಮ್ಯಂತರಿಕ್ಷಗಳಿಗೆ ಆವುದನ್ನು ಮುಚ್ಚಲಿ? ಅಯ್ಯೋ ನಾನೆಂತಹ ಹುಚ್ಚನು! ಈಗೀ ವಿಚಾರದಿಂದೇನು? ಮೊರೆಯಿಡುವುದ ರಿಂದೇನು? ಆವುದರಿಂದಲೂ ಇನ್ನು ಪ್ರಯೋಜನವಿಲ್ಲ. ಅಂದು ಬುದ್ಧಿಯಿಲ್ಲದಾಯಿತು. ಅಂದು ಪೂರ್ವಾಪರ ಯೋಚನೆಯೇ ಇಲ್ಲದಾಯಿತು. ಆದರೆ, ಹೀಗೆಲ್ಲಾ ಆಗುವುದೆಂದು ಯಾರು ಎಣಿಸಿದ್ದರು?

ಪಾಠಕವರ! ನಿಮಗೆ ಪಾಪಿಗಳಲ್ಲಿ ಕರುಣೆಯಿರುವುದೇ? ನಾನೀಗ ಎಂತಹ ಯಾತನೆಯನ್ನನುಭವಿಸುತ್ತಿರುವೆನೆಂದು ನಿಮಗೆ ತಿಳಿಯಬಲ್ಲುದೆ? ನಿಮಗೆ ಬೇಸರವಾಗಲಾರದಾದರೆ ಒಮ್ಮೆ ಎಲ್ಲ ಹೇಳಿಬಿಡುವೆನು. ಏನಾಗದೆ?

ಪಾಠಕವರ! ನಿಮಗೆ ಗೊತ್ತಿರಬಹುದು. ಈಗ ಕೆಲ ದಿನಗಳ ಹಿಂದೊಂದು ರಾತ್ರಿ ಎಲ್ಲೆಲ್ಲೂ ಬೆಳ್ದಿಂಗಳು ಚೆನ್ನಾಗಿ ತುಂಬಿದ್ದಿಲ್ಲವೆ? ಅಂದು ಆಕಾಶವು ಶುಭ್ರವಾಗಿತ್ತು. ಅಂದು ರಾತ್ರಿ ನನಗೆ ತುಂಬಾ ಉಲ್ಲಾಸವಿತ್ತು. ಅದೇ ನನ್ನ ಜೀವಿತದಲ್ಲಿ ಕೊನೆಯ ಉಲ್ಲಾಸವಾಗಿ ಪರಿಣಮಿಸಿತು. ಮನುಷ್ಯನಿಗೆ ಹೆಚ್ಚಿನ ಉಲ್ಲಾಸವೂ ದುಃಖಸೂಚಕವೇನೋ, ಹೆಚ್ಚಿನ ಸುಖವೂ ದುಃಖಹೇತುವಾಗಿರಬಹುದು. ಹೆಚ್ಚಿನ ಭೋಗವೇ ಸರ್ವನಾಶಕ್ಕೆ ಕಾರಣವಾಗಬಹುದು. ಅದಕ್ಕೆ ನಾನೇ ನಿದರ್ಶನ. ಇನ್ನೇನು, ಅಂದು ರಾತ್ರಿ ಊಟವಾದೊಡನೆ ನಾನು ಮಹಡಿಯನ್ನು ಹತ್ತಿದೆ. ತಂಪಾದ ಗಾಳಿಯು ಬೀಸುತ್ತಿತ್ತು. ಹಾಲಿನಂತಹ ಬೆಳ್ದಿಂಗಳು ಪಸರಿಸಿತ್ತು. ಮಧುರಾನ್ನವನ್ನು ಮಿತವಾಗಿ ಉಂಡು, ಮನೋಹರವಾದ ಬೆಳ್ದಿಂಗಳಲ್ಲಿ ತಂಗಾಳಿಗೆ ಮೈಯೊಡ್ಡಿ ಅಡ್ಡಾಡುತ್ತಿರುವಾಗ—ಪಾಠಕವರ! ನಿಮಗಾದರೂ ಉಲ್ಲಾಸವಾಗಲಾರದೇ? ಅಂತಹ ಸಂದರ್ಭದಲ್ಲೊಮ್ಮೆ ಎಂತಹ ಚಿಂತೆಯನ್ನೂ ಮರೆಯಬಹುದಲ್ಲವೇ? ಅಂದ ಮೇಲೆ ನಿಶ್ಚಿಂತನಾದ ನನ್ನ ಮನಸ್ಸು ವಿಹಾರೋನ್ಮತ್ತವಾದುದರಲ್ಲಿ ಆಶ್ಚರ್ಯವೇನು? ಅಲ್ಲೇ ಅಡ್ಡಾಡುತ್ತಾ ಎಷ್ಟು ವೇಳೆ ಕಳೆಯಿತೋ ನನಗೆ ತಿಳಿಯಲೇ ಇಲ್ಲ ಆದರೆ, ಅಷ್ಟರಲ್ಲಿ ಮಹಡಿಯ ಮೆಟ್ಟಲಲ್ಲಿ ಬಂದು ನಿಂತವಳು 'ಇಂದೇನು ಮಲಗುವುದಿಲ್ಲವೇ? ತುಂಬಾ ರಾತ್ರೆಯಾಯಿತಲ್ಲ' ಎಂದಳು. ಅವಳೆಂದರೆ ತಿಳಿಯಿತೇ? ನನ್ನ ಲೀಲೂ ಸದ್ಯಕ್ಕೆ ನನ್ನ ಮೃತ್ಯು ಹೆಂಗುಸರ ಹೃದಯದಲ್ಲಿ ಸ್ವಲ್ಪವೂ ಪೂರ್ವಾಪರ ಜ್ಞಾನವಿಲ್ಲ. ಅಥವಾ ಎಷ್ಟೋ ವಿಚಾರವತಿಯರೂ ಇರುವದಿಲ್ಲವೇ? ಹಾಗಿದ್ದರೇನು? ನನ್ನ ಕರ್ಮವೆ? ಯಾರನ್ನು ದೂರಲಿ? ಆಗ ನಾನು 'ಇಂದೇಕೋ ಇಲ್ಲೇ ಮಲಗಬೇಕೆಂದೆನಿಸುತ್ತದೆ. ನನ್ನ ಹಾಸಿಗೆಯನ್ನು ಇಲ್ಲೇ ಕೊಠಡಿಯಲ್ಲಿ ಹಾಸುವಂತೆ ಸಿದ್ದುವಿಗೆ ಹೇಳು' ಅಂದೆ"

---

# ಎರಡನೆಯ ಪರಿಚ್ಛೇದ

"ನಡುವಿರುಳು ದಾಟಿರಬಹುದು. ಸುಖನಿದ್ದೆಯಿಂದೊಮ್ಮೆ ಎಚ್ಚರವಾಯಿತು. ಗಾಳಿಗಾಗಿ ತೆರೆದಿಟ್ಟಿದ್ದ ಕಿಟಕಿಯಿಂದ ಬೆಳ್ದಿಂಗಳು ಹೊಕ್ಕು ನನ್ನ ಮುಖದ ಮೇಲೆಯೇ ಬಿದ್ದಿತ್ತು. ಕಣ್ತೆರೆದು ನೋಡಿದೆ. ಪೂರ್ಣಚಂದ್ರನು ಕಣ್ಗೊಳಿಸಿದನು. ಸ್ವಲ್ಪ ಹೊತ್ತು ಹಾಗೆಯೇ ನೋಡುತ್ತಿದ್ದ ನನಗೆ ಒಂದು ವಿಚಾರವು ಸ್ಮರಣೆಗೆ ಬಂತು. ಪೂರ್ಣಚಂದ್ರನನ್ನು ನೋಡಿದಾಗಲೆಲ್ಲಾ ನನ್ನಾ ವಿಚಾರವು ಸ್ಮರಣೆಗೆ ಬರುತ್ತಿತ್ತು. ಆದರೆ, ಪ್ರಯತ್ನದಿಂದ ಅದೆಲ್ಲವನ್ನೂ ಮರೆಯುತ್ತಿದ್ದೆ. ಆದರೆ, ಇಂದೇಕೋ ಸ್ವಲ್ಪ ಹೆಮ್ಮೆಯುಂಟಾಯಿತು.

ಚಂದ್ರನನ್ನು ನೋಡುತ್ತಿದ್ದಂತೆ ನನ್ನ ಬಾಯಿಯಿಂದ 'ಚಂದ್ರನೊಬ್ಬ ಸಾಕ್ಷಿಯಂತೆ. ಈ ಚಂದ್ರನ ಸಾಕ್ಷಿಯಿಂದಾದುದೇನು?' ಎಂಬ ಮಾತುಗಳು ಹೇಗೋ ಹೊರ ಬಿದ್ದವು.

ಲೀಲುವು ಪಕ್ಕದಲ್ಲೇ ಮಲಗಿದ್ದಳು. ಆಕೆಯ ಎಡದ ತೋಳಿನಲ್ಲಿ ನನ್ನ ತಲೆಯಿತ್ತು. ನಾನೀ ಮಾತುಗಳನ್ನಂದೊಡನೆ ಆಕೆಯು ಅರ್ಧಕ್ಕೆ ಎದ್ದು ನನ್ನ ಮುಖವನ್ನು ನೋಡಿದಳು, ನಾನು ಚೆನ್ನಾಗಿ ಎಚ್ಚರಗೊಂಡಿದ್ದುದನ್ನು ಕಂಡು, 'ನೀವೇನು, ಇನ್ನೂ ನಿದ್ದೆ ಹೋಗಿಲ್ಲವೇ? ಅದೇನೋ ಅಂದಿರಲ್ಲ, ಏನದು?' ಎಂದು ಕೇಳಿದಳು.

'ಏನೋ ಅಂದೆ, ನಿನಗೇಕೆ? ನೀನೇಕೆ ನಿದ್ದೆ ಹೋಗಿಲ್ಲ' ಎಂದು ನಾನೂ ಕೇಳಿದೆ. ಆದರೆ ನಾನು ಹಾಗೆ ಕೇಳಬಾರದಾಗಿತ್ತು. ಏನೋ ಕನಸಿನಲ್ಲಿ ಅಂದಿರಬೇಕೆಂದು ಹೇಳ ಬಹುದಾಗಿತ್ತು. ಆಕೆಯೂ ನಂಬುತ್ತಿದ್ದಳು ಏನೋ ಅಂದೆ, ನಿನಗೇಕೆ? ಎಂದು ಹೇಳಿ ದ್ದರಿಂದ ಆಕೆಯನ್ನಾಕ್ಷೇಪಿಸಿದಂತಾಯಿತು. ಎಚ್ಚರವಿದ್ದು ಬೇಕೆಂದೇ ಹೇಳಿದ ಮಾತೆಂದು ತಿಳುಕೊಂಡಾಕೆಯು 'ಏನೋ ಅಂದುದಲ್ಲ. ನಾನು ಚೆನ್ನಾಗಿ ಕೇಳಿದೆ. ಚಂದ್ರನೊಬ್ಬ ಸಾಕ್ಷಿಯಂತೆ, ಈ ಚಂದ್ರನ ಸಾಕ್ಷಿಯಿಂದ ಆದುದೇನೆಂದಿರಿ. ಹಾಗೆಂದರೇನು ಹೇಳಿ' ಎಂದು ಚಂಡಿಹಿಡಿದು ಕೇಳಲಾರಂಭಿಸಿದಳು. ಆದರೂ ನಾನು 'ನಿನಗೆ ಬುದ್ಧಿಯಿಲ್ಲ, ನಿದ್ದೆಯ ಲ್ಲಂದುದನ್ನೆಲ್ಲಾ ಹೀಗೆ ಚಂಡಿ ಹಿಡಿದು ಕೇಳುವರೇ? ನನಗೆ ನಿದ್ದೆಯು ಬರುತ್ತಿದೆ.' ಎಂದಂದೆ. ಆದರೆ ಈ ಮಾತೂ ಆಕೆಗೆ ರುಚಿಸದೆ ಕೆದರಿಸಿತು 'ನಿಮ್ಮ ನಿದ್ದೆಗೆ ನಾನೇಕೆ ಅಡ್ಡಿ ಬರಬೇಕು. ಸುಖವಾಗಿ ನಿದ್ದೆಮಾಡಬಹುದಲ್ಲ' ಎಂದು ಅಭಿಮಾನದಿಂದ ನುಡಿದು ದೂರಕ್ಕೆ ಸರಿದು ಮಲಗಿಕೊಂಡಳು, ಅವಳು ಆವ ವಿಷಯವನ್ನೂ ಇಷ್ಟು ಕಾಡಿ ಕೇಳಿದ್ದಿಲ್ಲ. ಅಥವಾ ನಾನಾ ದರೂ ಅವಳ ಮುಂದೆ ಇಷ್ಟು ಬಚ್ಚಿಟ್ಟ ವಿಷಯವೇ ಇಲ್ಲ. ಅದರಿಂದಲೇ ಆಕೆಯ ಕುತೂ ಹಲವು ಮಿತಿಮೀರಿರಬೇಕು, ಅಂತೂ ನನಗೆ ಸಂಕಟಕ್ಕೆ ಬಂದಿತು.

ಆಗ ನಾನು 'ಲೀಲೂ! ಇಂದೇಕೆ ಹೀಗೆ ಮಾಡುವಿಯೇ' ಎಂದು ಅಂದೆ. ಅವಳು: 'ನಾನು ನಿಮಗೇನನ್ನೂ ಮಾಡಿಲ್ಲವಲ್ಲ!' ಎಂದು ಗಡುಸಾಗಿಯೇ ಉತ್ತರವಿತ್ತಳು.

ಗೂಢ ಪಾಪಿಯ ಅಂತರಂಗವು ಯಾವಾಗಲೂ ಶುದ್ಧವಿರುವುದಿಲ್ಲ ಆತನಿಗೆ ಎಂದೂ ಮನಃಶಾಂತಿಯಿಲ್ಲ. ನನ್ನ ಪೂರ್ವ ಸಂದರ್ಭವು ನನ್ನ ಸ್ಮರಣೆಗೆ ಬರುತ್ತಾ ಯಾವಾಗಲೂ ನನ್ನನ್ನು ತಳಮಳಗೊಳಿಸುತ್ತಿತ್ತು. ಹಾಯ್! ನೆನಸಿಕೊಂಡರೆ ಎದೆಯು ಬಿರಿಯುವಂತಾ ಗುವುದು. ಆ ಭಯಂಕರ ಘಟನೆಯು ಆಗಲೇ ನಡೆಯುತ್ತಿರುವುದೋ ಎಂದನ್ನುವಂತಾ ಗುವುದು. ಪ್ರತಿಯೊಂದು ಮಾತೂ ಆಗಲೇ ಕೇಳುತ್ತಿರುವಂತಾಗುವುದು, ರಾತ್ರಿಕಾಲ ದಲ್ಲಂತೂ ಇಂತಹ ಗಾಢ ವಿಚಾರಗಳು ಒಮ್ಮೆ ಮನಸ್ಸನ್ನಾಕ್ರಮಿಸಿದರೆ ತೀರಿತು, ಮುಂದೆ ನಿದ್ದೆಯೇ ಬೀಳುವಂತಿಲ್ಲ. ಅಂದಿನಾ ರಾತ್ರಿ ನನ್ನಾ ದುರಂತ ವಿಚಾರದಿಂದ ಹಣ್ಣಾಗಿದ್ದೆ ನಾದರೂ ಅಂತಹುದನ್ನೂ ದಕ್ಕಿಸಿಕೊಂಡೆನಲ್ಲಾ ಎಂದೊಂದು ರೀತಿಯ ಹೆಮ್ಮೆಯು ಮೊಳೆ ಯಲಾರಂಭವಾಯಿತು. ಹೆಮ್ಮೆಯು ಮನುಷ್ಯನಿಗೆ ತೀರ ಕೆಟ್ಟುದೆಂದು ನನಗೀಗ ತಿಳಿಯಿತು.

ಹೆಮ್ಮೆಯಿಂದಲೇ ನಾನಾ ಮಾತನ್ನಂದಿರಬೇಕು. . ನನ್ನ ಸರ್ವನಾಶದ ಭಯದಿಂದ ಆ ವರೆಗೂ ಬಚ್ಚಿಟ್ಟಿದ್ದ ಸಂಗತಿಯನ್ನು ನನ್ನಾ ಹೆಮ್ಮೆಯೇ ಹೊರಪಡಿಸಿತೆನಬಹುದು. ಹೊರಪಡಿಸಿದರೂ ನಿರ್ಜನ ನೀರವವಾದಾ ನಡುವಿರುಳಲ್ಲಿ ಅದಾರಿಗೆ ಕೇಳಬಹುದಾಗಿತ್ತು? ಲೀಲುವಿಗೇಕೆ ಎಚ್ಚರವಿತ್ತು? ಛೆ! ಎಲ್ಲವೂ ನನ್ನ ಅವಧಿಯು ತೀರುತ್ತಾ ಬಂದುದರಿಂದಲೇ ಆಗಬೇಕು. ಇಷ್ಟುಕಾಲ ಇಷ್ಟೊಂದು ಗೂಢವಾಗಿಟ್ಟಿದ್ದ ಸಂಗತಿಯಿಂದಲೂ ನನ್ನ ಸರ್ವ ನಾಶವಾಗುವುದಾದರೆ ಇನ್ನಾರನ್ನು ದೂರಲಿ!

ಲೀಲುವು ನನ್ನನ್ನು ನಿಜವಾಗಿಯೂ ಪ್ರೀತಿಸುತ್ತಿದ್ದಳು. ಅಂತಹ ನಿರ್ಮಲಪ್ರೇಮ ವನ್ನು ನಾನೆಲ್ಲೂ ಕಂಡಿಲ್ಲ. ಪಾಪಿಯಾದ ನಾನೇ ನನ್ನ ಪ್ರೇಮವನ್ನು ಬೇರೆ ಕಡೆಗಳಲ್ಲಿ ಅರ್ಪಿಸುತ್ತಿದ್ದೆನು. ಆದರೂ ಬೇರೆ ಕಡೆಗಳಲ್ಲಿ ನಿರ್ಮಲವಾದ ಪ್ರೇಮವನ್ನು ನಾನು ಹೊಂದ ಲಿಲ್ಲ. ನಾನು ತೀರ ಸ್ವಾರ್ಥಸಾಧಕನಾಗಿದ್ದೆ. ಆದರೆ, ಎಂದು ನನ್ನ ಜೀವಿತದಲ್ಲೇ ದಾರು ಣವಾದ ಆ ದುಷ್ಕಾಲವನ್ನು ಕಳೆದು ಸ್ವಗೃಹವನ್ನು ಸೇರಿದೆನೋ ಅಂದೇ ನನಗೆ ನಿರ್ಮಲ ವಾದ ಪ್ರೇಮದ ಪರಿಚಯವಾಯಿತು. ಲೀಲುವಿನ ಪ್ರೇಮವು ಅಗಾಧ! ಅನಂತ! ಅಂತಹ ಳಿಗೂ ನನ್ನ ಗತವೃತ್ತಾಂತವನ್ನು ಹೇಳದೆ ಬಚ್ಚಿಡಬೇಕಾಗಿತ್ತು. ನನ್ನ ಪಾಪಮಯವಾದ ಕರ್ಮಕಥೆಯನ್ನವಳು ಕೇಳಿದರೆ ನನ್ನಲ್ಲಿ ಜುಗುಪ್ಸೆಯನ್ನು ಹೊಂದಬಹುದು. ಅಷ್ಟೇ ಅಲ್ಲ, ನನ್ನ ಗೂಢ ಜಾಲವು ಬಹಿರಂಗಪಟ್ಟರೆ ನನ್ನ ಸರ್ವನಾಶಕ್ಕೆ ಮತ್ತೆ ವಿಳಂಬವಾಗದೆಂದು ನನಗೆ ಚೆನ್ನಾಗಿ ತಿಳಿದಿತ್ತು ಈ ಕಾರಣದಿಂದ ನಾನು ನನ್ನ ಮನಸ್ಸನ್ನು ಬಿಗಿಹಿಡಿದು ಎಂದೂ ಗುಟ್ಟನ್ನು ಬಿಡುತ್ತಿದ್ದಿಲ್ಲ. ಎಷ್ಟೋ ಬಾರಿ ನನ್ನಾ ಗತಕಾಲದ ಅನುಭವಗಳನ್ನು ತಲ್ಲೀನನಾಗಿ ಚಿಂತಿಸುತ್ತಿರುವಾಗ ಲೀಲುವು ಯೋಚನೆಯೇನೆಂದು ಕೇಳುತ್ತಿದ್ದುದುಂಟು ಆದರೆ, ಆಗ ಆಕೆಗೆ ಸ್ವಲ್ಪವೂ ಸಂದೇಹವುಂಟಾಗದಂತೆ ಸಮಾಧಾನಪಡಿಸುತ್ತಿದ್ದೆನಲ್ಲ. ಆದರೆ ಅಂದಿನಿರುಳು ಮತ್ತೇಕೆ ಸುಳ್ಳನ್ನೇ ಹೇಳಿ ಸಮಾಧಾನಪಡಿಸದೆ ಹೋದೆ. ನಿಜವಾಗಿಯೂ ಇದು ಹೆಮ್ಮೆಯ ದೋಷವಾಗಿದ್ದೀತು.

ನನ್ನಾ ಕರ್ಮಕಥೆಗೆ ಇಂದಿಗೆ ಆರು ವರ್ಷಗಳು ಸಂದುಹೋದುವು. ಅದಕ್ಕೆ ಸಂಬಂಧಿ ಸಿದ ಯಾವುದೊಂದು ಕುರುಹೂ ಇನ್ನಿರುವಂತಿಲ್ಲ. ಇನ್ನು ನನ್ನ ಕಥೆಯು ಪ್ರಕಟವಾ ದರೂ ಅದನ್ನು ಕುರಿತು ವಿಚಾರ ನಡೆಸತಕ್ಕವರಿರಲಾರರೆಂದು ಮುಂತಾದ ವಿಚಾರದಿಂದ ನನ್ನಾ ಗತ ರಹಸ್ಯದಲ್ಲಿ ನನಗೆ ಮಹತ್ವವು ಇಳಿಯುತ್ತಿತ್ತು. ಆದಕಾರಣ, ಲೀಲುವಂತಹ ಸರಳಹೃದಯೆಗೆ ಇನ್ನೂ ಅದನ್ನಡಗಿಸಲೇಕೆಂದೆಣಿಸಿದೆ. ಆಹಾ! ಸ್ತ್ರೀಯ ಮೋಹಕ ಶಕ್ತಿ ಯೇ! ತನ್ನ ಪ್ರಣಯ ಲೀಲೆಯಿಂದ ಪುರುಷರ ಸರ್ವನಾಶದ ಕಾರಣವನ್ನೂ ಎಷ್ಟು ಹಗುರವೆ ನಿಸುವಳು! ನಾನಾವ ವಿಚಾರವನ್ನು ಜೀವಮಾನದಲ್ಲೇ ಹೊರಪಡಿಸತಕ್ಕುದಲ್ಲವೆಂದು ಆರು ವರ್ಷಗಳಿಂದ ಗುಪ್ತವಾಗಿಟ್ಟಿದ್ದೆನೋ ಅದನ್ನು ಅಂದಿನಿರುಳು ಆ ಸ್ತ್ರೀ ಲೀಲೆಯು ಎದುರು ತುಚ್ಛವಾಗೆಣಿಸಿದನಲ್ಲವೇ! ಮತ್ತೇನು, ಅಂತಹ ಏಕಾಂತ ವಿನೋದ ಸಮಯದಲ್ಲಿ ಹೇಗಾ

ದರೂ ಲೀಲುವನ್ನು ಸಮಾಧಾನಗೊಳಿಸಬೇಕೆಂದೆನಿಸಿತು. ನಿಜವೃತ್ತಾಂತವನ್ನೇ ಸ್ವಲ್ಪವಾಗಿ ಹೇಳಿಬಿಡುವ ಎಂದು ನಿರ್ಧರಿಸಿ 'ಲೀಲೂ!' ಅಂದೆ

ಲೀಲು:—ಏಕೆ?

ನಾನು:—ಬಹಳ ಕೋಪಿಸಿಕೊಂಡಿರುವೆಯಲ್ಲವೇ?

ಲೀಲು:—ಅದರಿಂದೇನೀಗ?

ನಾನು:—ಬೇಡ ಬಾ, ಹೇಳುವೆನು ಬಾ!

ಲೀಲು:—ಬೇಡ. ಏನನ್ನಾದರೂ ಹೇಳಲೇಕೆ? ನನಗೆ ಬೇಡ.

ನಾನು:—ಇಲ್ಲ, ನಿಜವನ್ನೇ ಹೇಳುವೆನು ಬಾ!

ಲೀಲು:—ಇನ್ನೂ ಆಲೋಚನೆ ಮಾಡಿಕೊಳ್ಳಿ.

ನಾನು:—ಇನ್ನು ಆಲೋಚನೆ ಮಾಡಿದರೂ ಮಾಡದಿದ್ದರೂ ಒಂದೇ.

ಲೀಲು:—ಅದೇನು?

ನಾನು:—ನಿನಗಂತೂ ಹೇಳದೆ ಸಮಾಧಾನವಿಲ್ಲವಷ್ಟೆ.

ಲೀಲು:—ಅಷ್ಟು ಕಷ್ಟವಾಗುವುದಾದರೆ ಹೇಳುವುದು ಬೇಡ.

ನಾನು:—'ಲೀಲಾ! ಕಷ್ಟ ಬಂದರೆ ನಮಗಿಬ್ಬರಿಗೂ ಹಂಚಿಯೇ ಬರುವುದೆಂದು ಅರಿಯೆಯಾ? ಬಾ! ಇನ್ನೇನೂ ಅಂತಹ ಸಂಭವವಿಲ್ಲ. ಅದನ್ನೇ ಇಷ್ಟು ಹೊತ್ತು ಯೋಚಿಸುತ್ತಿದ್ದೆ. ಇಷ್ಟು ಕಾಲದ ಮೇಲೆ ಇನ್ನೆಲ್ಲಿಯ ತಂಟೆ? ಬಾ! ನನ್ನ ಮಾತಿನ ಅರ್ಥವನ್ನು ಹೇಳುವೆನು ಬಾ.' ಎಂದು ಕೈನೀಡಿ ಕರೆದೆ. ಕೂಡಲೇ ಲೀಲುವು ನನ್ನೊತ್ತಾಗಿ ಬಂದು ತನ್ನ ಕೈಯನ್ನು ಹಿಡಿದು 'ನಿಜವನ್ನೇ ಹೇಳುವಿರಲ್ಲವೇ? ನೋಡೋಣ'ವೆಂದು ನನ್ನ ಮುಖವನ್ನೇ ನೋಡತೊಡಗಿದಳು.

---

## ಮೂರನೆಯ ಪರಿಚ್ಛೇದ

ನಾನು ಅರ್ಧಮಗ್ಗುಲಾಗಿ ಮಲಗಿಕೊಂಡು ಆಕೆಯ ಕೈಯನ್ನು ನೀವುತ್ತಾ "ಲೀಲು! ಜೋಕೆ? ಈ ಗುಟ್ಟು ನಿನ್ನ ಹೊರತು ಇನ್ನಾರಿಗಾದರೂ ತಿಳಿದಲ್ಲ ನಮ್ಮಿಬ್ಬರ ಸರ್ವನಾಶವಾದೀತು. ಜೋಕೆ! ನನ್ನ ಲೀಲಾ! ಯಾರಿಗೂ ಹೇಳದಿರುವೆಯಲ್ಲವೇ? ನನ್ನ ಜೀವ ಮಾನದಲ್ಲೇ ಯಾರಿಗೂ ಹೇಳತಕ್ಕುದಲ್ಲವೆಂದೆಣಿಸಿದ್ದೆ. ಆದರೆ ನಿನಗೆ ಮಾತ್ರ ಇಂದು ಹೇಳುತ್ತೇನೆ. ಎಂದಂದುಕೊಂಡು, ಆ ಏಕಾಂತದಲ್ಲಾದರೂ ಸುತ್ತಲೂ ಒಮ್ಮೆ ನೋಡಿಕೊಂಡೆ ಲೀಲುವಿನ ಮುಖದ ಹತ್ತಿರ ಹೋಗಿ ಪಿಸುಮಾತುಗಳಿಂದಲೇ ನನ್ನಾ ರಹಸ್ಯವನ್ನು ಸಂಕ್ಷೇಪವಾಗಿ ತಿಳಿಸಿದೆ. ಅದನ್ನು ಕೇಳಿ ಲೀಲುವು 'ಅಯ್ಯೋ!' ಎಂದು ತುಂಬಾ ಕಂಗಾಲಾದುದನ್ನು

ಕಂಡು ನನ್ನ ಎದೆಯು ದಸ್ಸೆಂದಿತು. ಕೂಡಲೇ ಅವಳ ಬಾಯಿಗೆ ಕೈಹಿಡಿದು 'ಸುಮ್ಮನಿರು' ಎಂದು ಲಘುವಾಗಿ ಗದರಿಸಿದೆ. ಲೀಲುವು ತನ್ನ ಎರಡೂ ಹಸ್ತಗಳನ್ನು ಮುಖಕ್ಕೆ ಮುಚ್ಚಿ ಕೊಂಡು, ಕ್ಷಣಹೊತ್ತು ನೆಲಹಿಡಿದು ಮಲಗಿಕೊಂಡಳು. ಆಕೆಯನ್ನು ತಡವರಿಸಲು, ಆಕೆಯ ಮೈಯೆಲ್ಲಾ ಬೆವರಿಂದ ನೆನೆದಿತ್ತು.

ನನಗಾದರೂ ಆ ವೇಳೆಯಿಂದೊಂದು ಹೊಸ ಕಳವಳಕ್ಕಾರಂಭವಾಯಿತು. ಲೀಲುಗೆ ಏನಾದರೂ ಸುಳ್ಳನ್ನೇ ಹೇಳಿ ಸಮಾಧಾನಪಡಿಸಬಹುದಿತ್ತೆಂದು ಯೋಚಿಸಿಕೊಂಡೆ ಮನ ಸ್ಸಿನಲ್ಲೇನೋ ಹೊಸದೊಂದು ಭಯವು ಪ್ರವೇಶಿಸಿದಂತಾಗಿ ನನ್ನ ಮೈಯೂ ಬೆವರಿಡು ವಂತಾಯಿತು ಅಷ್ಟರಲ್ಲಿ ಲೀಲುವು 'ರಾಮರಾಮಾ' ಎಂದು ಮುಖವನ್ನೆತ್ತಿದಳು. ನಾನು 'ಲೀಲಾ! ಎಂದೋ ನಡೆದು ಹೋಗಿದ್ದ ಈ ಸಂಗತಿಯನ್ನು ಕೇಳಿಯೇ ಇಷ್ಟು ಕಳವಳಗೊ ಳ್ಳುವ ನೀನು ಶುದ್ಧ ಪುಕ್ಕಳು. ಚಿಂತಿಲ್ಲ. ಈ ಕುರಿತು ಇನ್ನಾರ ಮುಂದೆಯೂ ಏನನ್ನಾ ದರೂ ಚಾ ಚೂ ಎತ್ತಬೇಡ, ಕಂಡೆಯಾ! ನಿನಗಂತು ತಿಳಿಯಿತು. ನನ್ನ ಜೀವವನ್ನೇ ನಿನ್ನ ಕೈಯಲ್ಲಿ ಕೊಟ್ಟದ್ದೇನೆ' ಎಂದು ಚೆನ್ನಾಗಿ ಎಚ್ಚರಿಕೆಯನ್ನಿತ್ತೆ.

ಲೀಲುವು ಮಾತಾಡದೆ ದೀರ್ಘಶ್ವಾಸವೊಂದನ್ನು ಬಿಟ್ಟಳು.

## ನಾಲ್ಕನೆಯ ಪರಿಚ್ಛೇದ.

"ನನ್ನ ರಹಸ್ಯವು ಲೀಲುಗೆ ತಿಳಿದು ಕೆಲವು ದಿನಗಳು ಸಂದಿರಬಹುದು. ಒಂದು ದಿನ ನಮ್ಮ ಅತ್ತೆಯವರು ನಮ್ಮಲ್ಲಿಗೆ ಬಂದರು. ಅವರೊಂದು ನಾಲ್ಕೆಂಟು ದಿನಗಳ ವರೆಗೆ ನಮ್ಮಲ್ಲಿ ಉಳಿದಿದ್ದರು. ಅವರು ನಮ್ಮ ಲೀಲುವಿನ ತಾಯೆಂದಿಷ್ಟೆ ಅಲ್ಲ, ನನಗೆ ಸೋದರತ್ತೆ ಯೂ ಆಗಿದ್ದು ಚಿಕ್ಕಂದಿನಿಂದಲೂ ನನ್ನಲ್ಲಿ ತುಂಬಾ ಮಮತೆ ಸಲುಗೆ ಉಳ್ಳವರಾಗಿದ್ದರು.

ಹೀಗೆ ನಮ್ಮಲ್ಲಿದ್ದವರು ಊರಿಗೆ ಹೋಗ ಹೊರಟವರು ಮಹಡಿಯ ಮೇಲೆ ಹತ್ತಿ ಬಂದರು ಅಲ್ಲಿ ನಾನು ಏನನ್ನೋ ಚಿಂತಿಸುತ್ತಾ ಕುಳಿತಿದ್ದೆ. ಬಂದವರೇ 'ಏನೋ ಕೇಶವಾ! ಈಗೀಗ ತುಂಬಾ ಯೋಚನೆಯಲ್ಲಿ ಬಿದ್ದಿರುವೆ?' ಎಂದರು, ಆಗ ನಾನು 'ಇಲ್ಲತ್ತೆ, ಯೋಚನೆ ಯೇನೂ ಇಲ್ಲ'ವೆಂದೆ. ಅದಕ್ಕವರು; 'ನೋಡು, ಈಗಿನ ಸಂಗತಿಗಂತಲ್ಲ. ಆದರೆ, ಏನೇ ನೋ ತಲೆಹರಟೆ ಹಚ್ಚಿಕೊಂಡು ಕುಳಿತರೆ ಊಟ, ನಿದ್ದೆಗಳ ಪರಿವೆಯೂ ಇಲ್ಲದಂತಿರುವೆ ಯೆಂದು ಲೀಲು ಅನ್ನುತ್ತಿರುವಳು. ಹೌದೋ ಹೇಳು' ಎಂದರು. ಹಾಗೂ 'ನಿನಗೇನು ಮನೆಬಾಗಿಲು ಚೆನ್ನಾಗಿಲ್ವೇ? ಸಾಲ, ಸೋಲುಗಳ ತಂಟೆಯೇ? ದೇವರ ದಯೆಯಿಂದ ಯಾವ ಕೊರತೆಯೂ ಇಲ್ಲವಲ್ಲ ಲೀಲುವಂತೂ ಹೇಗಿದ್ದರೂ ನಿನ್ನವಳೇ ತಾನೆ. ಮತ್ತಿನ್ನೇನು ಬೇಸರವಿದ್ದೀತು' ಎಂದು ಮುಂತಾಗಿ ಹೇಳತೊಡಗಿದರು.

ಅವರು ಇದುವರೆವಿಗೂ ಈ ರೀತಿಯಾಗಿ ನನ್ನನ್ನು ಕೇಳಿದ್ದಿಲ್ಲ. ಅಲ್ಲದೆ, ನಾನು ಅಂತಹ ಯೋಚನಾ ಪರನಾಗಿರುವುದನ್ನೂ ಅವರು ಅಷ್ಟೊಂದು ನೋಡಿದ್ದಿಲ್ಲ. ಹೀಗಿರು ವಾಗ ಲೀಲುವೇ ಏನನ್ನಾದರೂ ಸ್ವಲ್ಪ ಹಚ್ಚಿಕೊಟ್ಟದ್ದರೂ ಇರಬಹುದೆಂದೆಣಿಸಿದೆ. ಅದೇ

ಸಂದೇಹವು ಬಲವಾಯಿತು. ಇನ್ನೇನು ನನ್ನ ರಹಸ್ಯವು ಲೀಲುವಿನ ಮೂಲಕ ಇವರಿಗೆ ತಿಳಿದು ಹೋಗಿರಬೇಕೆಂದು ತೋರಿತು. ಆಗ ನಾನು 'ಅತ್ತೆ! ನೀವಾವಾಗ ಕಂಡಿರಿ. ನಾನಾವ ಯೋಚನೆಯಲ್ಲಿರುವೆನು? ಹೊಸದಾಗಿ ಏನೋ ಹೇಳುತ್ತಿರುವಿರಲ್ಲ. ನನಗೆ ಸ್ವಲ್ಪ ತಲೆ ನೋಯುತ್ತದೆ'ಂದೆ. ಆದಕ್ಕವರು ಕೂಡಲೇ 'ಅದನ್ನೇ ಹೇಳುತ್ತಿದ್ದೇನೆ. ಎಂದೋ ಆಗಿ ಹೋದ ಬೇಡದಿದ್ದ ಹರಟೆಗಳನ್ನೆಲ್ಲಾ ಹಚ್ಚಿಕೊಂಡು ನಿದ್ದೆ ಬಿಟ್ಟಲ್ಲಿ ತಲೆ ನೋಯುದಿರುವುದೇ ನೋಡು' ಎಂದರು ನನಗಿನ್ನು ಸಂದೇಹವುಳಿಯಲಿಲ್ಲ. ಎಂದೋ ಆಗಿಹೋದ ವಿಚಾರವಿವರಿಗೆ ತಿಳಿದು ಹೋಗಿದೆ ನಾನು ಸ್ವಲ್ಪ ಕಣ್ಣುಗಳನ್ನರಳಿಸಿ ಅವರನ್ನೇ ನೋಡತೊಡಗಿದೆ. ಆಗವರು ಸ್ವಲ್ಪ ವ್ಯಂಗ್ಯವಾಗಿ ನಕ್ಕು 'ಕೇಶವಾ! ಹೆದರಬೇಡ'ವೆನ್ನುತ್ತಾ ನನ್ನ ಹತ್ತಿರ ಬಂದು ಸುತ್ತಲೂ ಒನ್ಮೆ ನೋಡಿದರು ಸ್ವರವು ಸ್ವಲ್ಪ ಇಳಿದು ಪಿಸುಮಾತಿಗಾರಂಭವಾಯಿತು. ನನ್ನ ಎದೆಯು ದಸ್ಸೆಂದಿತು. ನನ್ನ ರಹಸ್ಯವು ಅವರಿಗೂ ತಿಳಿದಿದೆಯಲ್ಲಾ ಎಂದು ನನಗೆ ತುಂಬಾ ಸಂತಾಪವೇರತೊಡಗಿತು. ಅಷ್ಟರಲ್ಲಿ ಅತ್ತೆಯವರು 'ಕೇಶವಾ! ನೀನೇನೂ ಯೋಚನೆ ಮಾಡಬೇಡ, ನಿನ್ನ ಸಂಗತಿಯು ನನಗೆ ಎಂದಿನಿಂದಲೋ ಗೊತ್ತು. ಲೀಲು ಹೇಳಿದಳೆಂದು ತಿಳಿಯಬೇಡ. ನನಗೆ ಮೊದಲೇ ಗೊತ್ತು' ಎನ್ನುತ್ತಿರಲು ನನಗೆ ಈ ತಾಯಿಮಕ್ಕಳಿಬ್ಬರೂ ಅಲ್ಲೇ ನೆಲದೊಳಗೆ ನೇರಿಹೋಗಲೊಲ್ಲರೇಕೆಂದೆನಿಸಿತು.

ನನಗೆ ಆಶ್ಚರ್ಯವಾಯಿತು. ಮೊದಲೇ ಗೊತ್ತು! ಹೀಗೆ? ಎಂದು ಮನಸ್ಸು ವಿಚಾರಕ್ಕೊಳಗಾಯಿತು. ಅಥವಾ ಇದು ಸುಳ್ಳು, ಅವರಿಗೆ ನನ್ನ ಆವ ವಿಚಾರವೂ ತಿಳಿದಿರಲು ಕಾರಣವಿಲ್ಲ. ಲೀಲುವಿಂದಲೇ ತಿಳಿದಿರಬೇಕು ಆಕೆಯು ಗುಟ್ಟನ್ನು ಬಿಟಳೆಂದು ನಾನು ಸಿಟ್ಟುಗೊಳ್ಳುವೆನೇನೋ ಎಂದು ಮೊದಲೇ ಗೊತ್ತು ಎಂದನ್ನುತ್ತಿರಬಹುದೆಂದೆಣಿಸಿದೆ.

ಅಂತೂ ಲೀಲುವು ತಾಯಿಯ ಮೇಲಿನ ಮಮತೆಯಿಂದ ನನ್ನ ಜೀವಿತ ರಹಸ್ಯವನ್ನು ಮೂರನೆಯವರಿಗೂ ಹೇಳಿದ್ದಾಳೆ. ಆಗಲಿ, ಮಾಡುವುದೇನೆಂದಂದುಕೊಂಡೆ. ಆಗ ಅತ್ತೆಯವರು 'ಕೇಶವಾ! ನನಗೆ ತಿಳಿಯಿತೆಂದು ನಿನಗೇನೂ ಹೆಚ್ಚಿನ ಕಳವಳಕ್ಕೆ ಕಾರಣವಿಲ್ಲ. ನನಗೆ ನಿನ್ನ ಹಿತ ಬೇರೆ, ಲೀಲುವಿನ ಹಿತ ಬೇರೆಂದೆಣಿಸಬೇಡ ಕಂಡೆಯಾ.' ಎಂದನ್ನುತ್ತಾ 'ಇಲ್ಲಿ ಕೇಳು, ಕೇಶವಾ! ನನಗೆ ತಿಳಿದುದು ಒಳ್ಳೆದೇ ಆಯಿತೆಂದು ತಿಳುಕೋ' ಎಂದರು. ನಾನು ಮನಸ್ಸಿನಲ್ಲಿ ನೀವು ಸತ್ತರೂ ಒಳ್ಳೆದೇ ಆದೀತೆಂದು ಶಪಿಸುತ್ತಾ ಬಾಯಲ್ಲಿ 'ಅತ್ತೆ! ದಮ್ಮಯ್ಯ ಒಳ್ಳೆದಾಗಲಿ, ಕೆಟ್ಟುದಾಗಲಿ, ಈ ಮಾತು ಇಷ್ಟಕ್ಕೇ ನಿಲ್ಲಲಿ. ಇನ್ನೆಲ್ಲೂ ಇಧನ್ನೆತ್ತದಿರಿ. ನನ್ನನ್ನು ಕೊಂದಂತೆ' ಎಂದು ತುಂಬಾ ದೀನತನದಿಂದ ಬೇಡಿಕೊಂಡೆ.

ಆದರೆ ಪ್ರಯೋಜನವೇನು? ಇನ್ನೂ ಭಯಂಕರ ಪ್ರಸಂಗವು ನಡೆದು ಹೋಗಿತ್ತು. ಅತ್ತೆಯು 'ಇಗೋ, ಒಳ್ಳೆಯದೆಂದರೆ ಕೇಳು. ಇದರ ಮೂಲವನ್ನೇ ಹುಡುಕಿ ನಿಶ್ಚಿಂತೆಯಿಂದಿರಲು ಜಾಣೆಯೊಬ್ಬಳ ಮೂಲಕ ಹಂಚಿಕೆಯನ್ನು ಮಾಡಿದ್ದೇನೆ. ಮಾಧವನ ಮನೆಯಲ್ಲಿ ಈ ಕುರಿತು ಏನು ಅಭಿಪ್ರಾಯದಿಂದಿರುವರೆಂಬುದನ್ನು ತಿಳುಕೊಂಡಲ್ಲಿ ನಮಗೆ ಒಳ್ಳೆಯದಲ್ಲವೇ?' ಎಂದರು. ಆಗ ನಾನು ಭಯದಿಂದ 'ಬೇಡ, ಅತ್ತೆ! ಬೇಡ. ಅಲ್ಲಿ ಈ

ಸಂಗತಿಯ ಕುರಿತು ಯಾವ ಅಭಿಸಂಧಿಯನ್ನೂ ನಡೆಸುವುದೇ ಬೇಡ. ಎಲ್ಲರೂ ಈಗ ತಿಳಿದಿದ್ದಂತೆಯೇಇದ್ದುಕೊಳ್ಳಲಿ.' ಎಂದೆನಾದರೂ ಕಾರ್ಯವು ಮಿಂಚಿ ಹೋಗಿರಬೇಕೆಂದಿನಿಸಿತು. ಅತ್ತೆಯ ಕುತೂಹಲವು ನನ್ನ ಬಾಯ್ಬಿಡಿಸುವುದರಲ್ಲೇ ನಂದಿಲ್ಲ. ನಮ್ಮ ಸೀತುವಿಗೂ ಹೇಳಿಬಿಟ್ಟದ್ದರೆಂದೆಣಿಸಿದೆ

ಸೀತುವೆಂದರೆ ನಮ್ಮತ್ತೆಗೊಂದು ಬಾಯಿ. ಅವಳು ಮೊದಲು ನಮ್ಮತ್ತೆಯವರಲ್ಲೇ ಕೆಲಸಕ್ಕಿದ್ದವಳು. ಅತ್ತೆಯವರು ನಮ್ಮಲ್ಲಿಗೆ ಬಂದರೆ ಸೀತುವೊಡನೆ ಹರಟೆಹೊಡೆಯುತ್ತಿರುವುದೇ ಹೆಚ್ಚು. ನಿಜವಾಗಿಯೂ ನನ್ನ ರಹಸ್ಯವು ಸೀತುವಿಗೂ ತಿಳಿದಿದೆಯೇ? ಸೀತುವೇನು ಮೊದ್ದು ಹೆಣ್ಣಲ್ಲ. ಜಾಣೆಯೆಂದರೆ ಅವಳೇ. ತೀರಾ ಬಾಯ್ಬಡಕಿ. ಅವಳಲ್ಲಿ ಯಾವ ರಹಸ್ಯವೂ ನಿಲ್ಲುವಂತಿಲ್ಲ. ಅಯ್ಯೋ!' ಎಂದಂದುಕೊಂಡೆ. ನನ್ನ ಕಳವಳವು ಕ್ಷಣಂಕ್ಷಣೇಹೆಚ್ಚ ತೊಡಗಿತು

ಆಗ ಅತ್ತೆಯವರು 'ಕೇಶವಾ! ನಿನಗೆ ಸೀತುವಿನ ಗುಣ-ಜಾಣ್ಮೆಗಳು ಇನ್ನೂ ತಿಳಿದಿಲ್ಲವೆಂದು ತೋರುತ್ತೆ. ನೋಡು ಯಾವ ಸಂಗತಿಯನ್ನೂ ನಾವೇ ದೊಡ್ಡದಾಗೆಣಿಸಿ ತಲೆ ಹರಟೆಮಾಡಿಕೊಳ್ಳುವುದಕ್ಕಿಂತ ಅದರ ತಾಗು-ಬಾಗುಗಳನ್ನು ನಿಶ್ಚಯಿಸಿಬಿಡುವುದೇ ಲೇಸು. ಇಂತಹುದಕ್ಕೆ ಸೀತುವು ತುಂಬಾ ಜಾಣೆ ಹೆಣ್ಣು ನೋಡು!' ಎಂದರು ಆಗ ನಾನು ಕಾತರನಾಗಿ 'ಅತ್ತೆ! ಏನು ಇಷ್ಟರಲ್ಲೇ ಸೀತುವಿಗೂ ಹೇಳಿಬಿಟ್ಟಿರುವಿರೇ?' ಎಂದು ಕೇಳಿದೆ ಆದಕ್ಕವರು 'ಇಲ್ಲ, ಹೆಚ್ಚಿನ ಸಂಗತಿಯಾವುದನ್ನೂ ಹೇಳಿಲ್ಲ. ಅಲ್ಲಿಯ ಅಭಿಪ್ರಾಯವನ್ನು ಮಾತ್ರ ಉಪಾಯದಿಂದ ತಿಳಿದು ಹೇಳಹೇಳಿದ್ದೆ' ಎಂದರು. ನನ್ನ ಮನಸ್ಸು ಕುದಿಯುತ್ತಿತ್ತು. ನಾನೇನೂ ಮಾತಾಡಲಿಲ್ಲ. ನಿಜವಾಗಿಯೂ ನನಗೆ ತಲೆಸಿಡಿತವು ಬಲವಾಗಹತ್ತಿತು. 'ಅತ್ತೆ! ನನಗೇಕೋ ತಲೆಯು ಸಿಡಿಯುತ್ತಿದೆ'ಯೆಂದೆ 'ಲೀಲಾ!' ಎಂದು ಅತ್ತೆಯವರು ಕೂಗಿದರು. ಲೀಲು ಅಲ್ಲೇ ಮಹಡಿಯ ಮೆಟ್ಟಿಲಲ್ಲಿ ನಿಂದಿರಬೇಕು. ಕೂಡಲೇ ಮೇಲೆ ಬಂದಳು, ಆಕೆಯನ್ನು ಕಂಡಕೂಡಲೇ ಮೃತ್ಯುದೇವತೆಯನ್ನು ಕಂಡಂತಾಯಿತು. ಏ ಹತಭಾಗಿನಿ ಎಂದು ತೀಕ್ಷ್ಣವಾಗಿ ಅವಳನ್ನೊಮ್ಮೆ ಕಂಡೆ ಅಷ್ಟರಲ್ಲಿ ಅತ್ತೆಯು 'ಲೀಲಾ! ನೋಡು ತಲೆನೋಯುತ್ತದಂತೆ, ಒಂದಿಷ್ಟು ತಲೆಗೇನಾದರೂ ಅರದಿಡು,' ಅಂದರು. ತಲೆಗೆ ಕಲ್ಲನ್ನಿಡುವುದೊಳ್ಳೆಯದೆಂದಂದುಕೊಂಡು ಆಯಾಸದಿಂದ ಒರಗಿಬಿಟ್ಟೆ.

ಕೂಡಲೇ ಸೀತುವನ್ನು ಕರದು ಎಲ್ಲೂ ಯಾವ ಸಂಗತಿಯನ್ನೂ ಎತ್ತಬೇಡವೆಂದು ಎಚ್ಚರವೀಯಬೇಕೆಂದೆಣಿಸಿದೆ. 'ಸೀತು!' ಎಂದು ಕೂಗಿದೆ, ಅತ್ತೆಯವರು 'ಕೇಶವಾ! ನಿನ್ನ ಮನಸ್ಸೇ ನಿನ್ನನ್ನು ತಿನ್ನುತ್ತಿರುವುದೆಂದು ತಿಳಿ. ಇನ್ನಾರಿಂದಲೂ ಏನೂ ಆಗಲಾರದು.' ಎಂದರು. ಹಾಗೂ ಎರಡು ಮೂರು ದಿನಗಳಲ್ಲೇ ತಿರುಗೊಮ್ಮೆ ಬರುವೆನು. ಆಗ ಎಲ್ಲವೂ ನಿರ್ಣಯವಾಗುವುದೆಂ'ದು ಹೇಳುತ್ತಾ ಇಳಿದು ಹೊರಟುಹೋದರು.

ಲೀಲುವು ಹತ್ತಿರ ಬಂದು 'ಸೀತುವನ್ನೇಕೆಕೂಗಿದಿರಿ?' ಎಂದು ತಡವರಿಸಲು ನನ್ನ ಮೈಯು ಸಂತಾಪದಿಂದ ಸುಡಹತ್ತಿತು. ಹತ್ತಿರ ಬಂದಾಕೆಯನ್ನು ಬಲವಾಗಿ ಒದ್ದು ದೂಡಿಬಟ್ಟೆ.

# ಐದನೆಯ ಪರಿಚ್ಛೇದ

ಎಳೆಂಟು ದಿನಗಳು ಸಂದುವು; ಎಲ್ಲರೂ ಅವರವರ ಮಟ್ಟಿಗಿದ್ದರು; ನನ್ನ ಪುಟ್ಟಿಗೆ ನಾನಿದ್ದೆ, ನನಗಾವುದೂ ಬೇಡವಾಗಿತ್ತು. ನಾನಾರೊಡನೆಯೂ ಮಾತನಾಡುತ್ತಿದ್ದಿಲ್ಲ. ನನ್ನ ಉದಾಸೀನವೃತ್ತಿಯಿಂದಾಗಿ ಬೇರಾರೂ ನನ್ನನ್ನು ಹೆಚ್ಚಾಗಿ ಮಾತನಾಡಿಸುತ್ತಲೂ ಇದ್ದಿಲ್ಲ. ಆದರೆ, ಕಂಡವರು ವಿಶೇಷವೇನೆಂದೆಣಿಸಬಾರದೆಂದು ತಲೆಶೂಲೆಯ ನೆಪವನ್ನಿಟ್ಟುಕೊಂಡಿದ್ದೆ. ನನ್ನಾ ಘೋರಕೃತ್ಯ ಹಾಗೂ ಅದರ ಬಹಿರಂಗದಿಂದುಂಟಾಗಲಿರುವ ಪರಿಣಾಮಗಳನ್ನು ಚಿಂತಿಸಿ ಚಿಂತಿಸಿ ನನ್ನ ಅಂತಃಕರಣವು ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚಾಗಿ ಬೇಯುಹತ್ತಿತ್ತು.

ಹೀಗಿರಲು ನನಗೊಂದು ಆತುರವು ಹೆಚ್ಚಿತು, ಸೀತುವನ್ನು ವಿಚಾರಿಸಲೇ ಬೇಕು. ಸೀತುವಿನಿಂದ ಒಟ್ಟದಂಗುವ ಸಂಭವವೇ ಹೆಚ್ಚಾದರೂ ಒಳ್ಳೆದೂ ಆಗಬಾರದೆಂದಿಲ್ಲ ನಾನೇಕೆ ನನ್ನೊಳಗೇ ಬೇಯುತ್ತಿರಬೇಕು. ಆಪತ್ತಿನಲ್ಲೂ ಸಂಪತ್ತನ್ನೆಣಿಸಬೇಕಂತೆ. ಸೀತುವಿಗೆ ಈ ವಿಚಾರ ತಿಳಿಯಲೇ ಬಾರದಿತ್ತು. ತಿಳಿದುಹೋಗಿಯದೆಯಾದರೆ ಇನ್ನು ಮಾಡುವುದೇನು? ಇನ್ನಾದರೂ ಅವಳನ್ನು ಅಂಕೆಗೆ ತಗೊಂಡು ಈ ದುರ್ವಾರ್ತೆಯು ಅಲ್ಲಿಂದಲ್ಲೇ ಆರಿಹೋಗುವಂತೆ ಏನಾದರೂ ಹಂಚಿಕೆಯನ್ನು ನಡೆಯಿಸಲು ಬರಲಾರದೆ? ಹೀಗೆ ನನ್ನ ವಿಚಾರವು ಬಲವಾಯಿತು ನಿರಾಶೆಯಲ್ಲೂ ಆಶಾಂಕುರವೊಂದು ಮೊಳೆಯಿತು. ಅಂಧಕಾರದಲ್ಲೂ ಕುರುಡು ದೀಪವೊಂದು ಮಿನುಗಿದಂತಾಯಿತು

ಒಂದು ದಿನ, ರಾತ್ರಿ ಉಂಡಬನೆ ಹೆಬ್ಬಾಗಲಲ್ಲಿ ಬಂದು ಅತ್ತಿತ್ತ ಅಡ್ಡಾಡತೊಡಗಿದೆ. ಇದೇ ಸಮಯವು ನನ್ನನ್ನಾವರಿಸಿತ್ತು; ಉಳಿದವರಿಗೆಲ್ಲಾ ಇನ್ನೂ ಊಟವು ತೀರಿದ್ದಿಲ್ಲ. ಸೀತುವು ಅಲ್ಲೇ ಹೆಬ್ಬಾಗಿಲಿನ ಕೋಣೆಯೊಳಗೆ ಕೆನ್ನೆಗೆ ಕೈಹಿಡಿದು ಕುಳಿತಿದ್ದಳು. ಬಾಗಿಲು ಅರ್ಧಾರ್ಧವಾಗಿ ಮುಚ್ಚಿತ್ತು. ಆಗಲೇ ಸೀತುವೊಡನೆ ನನ್ನ ಸಂಗತಿಯನ್ನು ಪ್ರಸ್ತಾವಿಸಬೇಕೆಂದೆನಿಸಿತು ಎರಡು ಮೂರು ದಿನಗಳಿಂದ ವೇಳೆಯನ್ನು ಕಾಯುತ್ತಿದ್ದೆ ಸರಿಯಾದ ವೇಳೆಯೇ ದೊರೆಯದು; ದೊರೆತರೂ ತುಂಬಾ ಸಂಕೋಚವಾಗುತ್ತಿತ್ತು, ಅದಕ್ಕೆ ಕಾರಣವೂ ಇದೆ.

ಸೀತುವು ಸಾಮಾನ್ಯ ಕೂಲಿಹೆಣ್ಣುಗಳಂತಿದ್ದಿಲ್ಲ ೨೨-೨೩ ವರ್ಷ ಪ್ರಾಯದ ಯುವತಿ ಹಾಗೂ ಅಕ್ಕಸ್ಸು ರೂಪವತಿಯೂ ಆಗಿದ್ದಳು. ಅಪರಿಚಿತರಾರೂ ಆಕೆಯನ್ನು ಕೂಲಿಯೆಂದು ತಿಳಿಯದೆ ಮನೆತನದ ಹೆಣ್ಣೆಂದೇ ತಿಳಿಯುತ್ತಿದ್ದರು ಪ್ರಾಯದ ಸುಂದರಿಯರೊಡನೆ ಹಿರಿ-ಕಿರಿಯರಿರಾದರೂ ದೇಶ-ಕಾಲಗಳನ್ನನುಸರಿಸಿ ಮಾತನಾಡಬೇಕಾಗುವುದು. ಅಂತೆಯೇ ಸೀತುವೊಡನೆಯೂ ನಾನು ಇಚ್ಛಾನುಸಾರ ಇಷ್ಟಬಂದಾಗೆಲ್ಲಾ ಮಾತನಾಡಲು ಸಂಕೋಚಪಡಬೇಕಾಗಿತ್ತು. ಎಂತಹ ಪಾರಮಾರ್ಥಿಕನೂ ಜನರಿಗೆ ಸಂದೇಹಕ್ಕೆಡೆಗೊಟ್ಟು ಎಂದೂ ವರ್ತಿಸಬಾರದೆಂದು ಬಲ್ಲವರು ಹೇಳುವರು ಹೀಗೆಲ್ಲಾ ಇದ್ದು ಸೀತುವೊಡನೆ ನನ್ನ ಸಂಗತಿಯನ್ನು ವಿಚಾರಿಸಲು ಅನುಕೂಲವಾದ ಸಂದರ್ಭವು ದೊರೆಯುವುದು ತೀರ ಕಷ್ಟವಾಯಿತು ನನ್ನಂತೆಯೇ ಸೀತುವಿನ ಸ್ಥಿತಿಯಾದರೂ ಇದ್ದೀತು. ನಿಸ್ಸಂಕೋಚವಾದ

ಸಂದರ್ಭವು ದೊರೆಯದಿದ್ದಲ್ಲಿ ಅವಳಾದರೂ ಮನಬಿಚ್ಚಿ ಆಡುವಂತಿಲ್ಲವೆಂದೂ ನನ್ನ ಹೃದ ಯವು ತಳಮಳಗೊಳ್ಳುತ್ತಿತ್ತು. ಆದರೂ ಸೀತುವೊಡನೆ ವಿಚಾರಮಾಡುವ ಆತುರವೇನೋ ನನಗೆ ಬಲವಾಯಿತು.

ಏನನ್ನೋ ನಿರ್ಧರಿಸಿ ಸೀತುವಿನ ಕೋಣೆಯ ಬಾಗಿಲಿಗೆ ಹೋಗಿ ಮೆಲ್ಲನೆ 'ಸೀತು!' ಅಂದೆ. ಆಕೆಯು ಕೂಡಲೇ ಎದ್ದುಬಂದು ಬಾಗಿಲನ್ನು ಅರೆದೆರೆದು ನನ್ನನ್ನು ಕಂಡು, ಲಜ್ಜಾ ಭಯಗಳಿಂದ ಸ್ವಲ್ಪ ಸಂಕೋಚಗೊಂಡು, 'ಏನಾಗಬೇಕು?' ಎಂದಳು.

ನಾನು:—ನಿನ್ನೊಡನೆ ಸ್ವಲ್ಪ ಮಾತನಾಡತಕ್ಕದಿದೆ.

ಸೀತು:—ಸಂಕೋಚವೇಕೆ?

ನಾನು:—ಅಂತಹ ಸಂಗತಿಯದು.

ಸೀತುವು ಕೂಡಲೇ 'ಹಾಗಾದರೆ, ನನಗೂ ನಿಮ್ಮೊಡನೆ ಸ್ವಲ್ಪ ಮಾತನಾಡತಕ್ಕದಿದೆ. ಈಗ ಆಗುವುದಿಲ್ಲ. ನೀವು ಒಪ್ಪುವುದಾದರೆ' ಎಂದು ಅರ್ಧದಲ್ಲಿ ನಿಲ್ಲಿಸುತ್ತಿರಲು ನಾನು 'ಸೀತು! ಹಾಗೆಂದರೇನು? ಅವುದನ್ನೊಪ್ಪಬೇಕು, ಬೇಗನೇ ಹೇಳು' ಅಂದೆ.

ನನ್ನ ಕುತೂಹಲವು ಇನ್ನಷ್ಟು ಹೆಚ್ಚಿತು, ಅಂತೂ ನನ್ನ ವಿಚಾರವು ಅವಳಿಗೆ ತಿಳಿ ದಿದೆ ಮಾತ್ರವಲ್ಲ, ಅದರ ಕುರಿತು ಅವಳು ಕೆಲಸವನ್ನೂ ಮುಂದುವರಿಸಿರಬಹುದೆಂದೂ ಕಂಡುಬಂತು.

ಸೀತು: —ನೀವು ಒಪ್ಪುವುದಾದರೆ ಒಂದು ಸಮಯವನ್ನು ಹೇಳುತ್ತೇನೆ.

ನಾನು:—ಸೀತು! ನೀನು ಯಾವ ವೇಳೆಗೆ ಎಲ್ಲೆಂದರೂ ಭೆಟ್ಟಿಯಾಗುತ್ತೇನೆ. ಸಂಕೋ ಚಪಡಬೇಡ.

ಸೀತು:—ರಾತ್ರಿ ೧೧ ಬಡೆದ ಮೇಲೆ, ಲೀಲಮ್ಮ ನಿದ್ದೆಹೋದ ಮೇಲೆ ನೀವಿಲ್ಲಿ ಬರ ಬೇಕು, ಸಂಕೋಚಪಡಬೇಡಿ, ಖಾವಿಂದ! ಬರಲೇ ಬೇಕು. ಇಲ್ಲವಾದರೆ ಕೆಲಸವು ಕೆಟ್ಟೀತು

ನಾನು ಕೂಡಲೇ ಕೋಣೆಯ ಬಾಗಿಲಿಂದ ದೂರಸರಿದು ಮೊದಲಿನಂತೆಯೇ ಅಡ್ಡಾಡ ತೊಡಗಿದೆ.

## ಆರನೆಯ ಪರಿಚ್ಛೇದ

ನಿಶೀಥ ಸಮಯ, ಪ್ರಕೃತಿಯೆಲ್ಲಾ ಗಾಢಾಂಧಕಾರದಿಂದ ತುಂಬಿತ್ತು, ಸರ್ವತ್ರ ನೀರವ, ಮನೆಯಲ್ಲಿ ಎಲ್ಲರೂ ಮಲಗಿದ್ದರು, ನಾನೂ ಮಲಗಿದ್ದೆ. ಆದರೆ, ಎಲ್ಲರಂತೆ ನಿದ್ದೆಹೋಗಿಲ್ಲ ಈಗ ಬಹಳ ದಿನಗಳಿಂದಲೂ ನನಗೆ ನಿದ್ದೆಯೂ ಹತ್ತುತಿದ್ದಿಲ್ಲ

ಗೋಡೆಯ ಗಡಿಯಾರವು ಎಲ್ಲಾ ಘಂಟೆಗಳನ್ನೂ ಬಡಿಯುತ್ತಿದ್ದುದು ನನಗೆ ಕೇಳಿಸು ತ್ತಲೇ ಇತ್ತು. ಹನ್ನೆರಡೂ ಬಡೆಯಿತು. ಆಗ ನಾನು ಎದ್ದೆಟ್ಟು ಸಗ್ಗುಲಾಗುವ ನವ ದಿಂದ ಆಚೆ ಈಚೆ ನೋಡಿದೆ ಲೀಲಾವು ಒಂದು ಬದಿಯಲ್ಲಿ ಬಿದ್ದು ಗಾಢ ನಿದ್ದೆಯಲ್ಲಿರುವ

ಳೆಂದು ಕಂಡುಬಂದಿತು. ನಾನು ಮೆಲ್ಲಗೆ ಎದ್ದು ಕುಳಿತೆ. ಕೂಡಲೇ ಎದ್ದು ನಿಂತು ಮೆಲ್ಲಗೆ ಹೊರಟೆ. ನಿಶ್ಶಬ್ದವಾಗಿ ಮಲಗುವ ಕೊಠಡಿಯ ಬಾಗಿಲನ್ನು ತೆರೆದೆ. ಒಮ್ಮೆ ಸ್ವಲ್ಪ ಸಂಕೋಚವಾಯಿತು. ಆದರೆ, ಕೂಡಲೇ ಇಷ್ಟೇಕೆ ಸಂಕೋಚಪಡಬೇಕು, ದೇಹಬಾಧೆ ಯನ್ನು ತೀರಿಸಲು ಸಹಜವಾಗಿ ಯಾರಾದರೂ ರಾತ್ರಿಗೆ ಎದ್ದು ಹೊರ ಹೋಗುವುದಿಲ್ಲವೇ ಎಂದಂದುಕೊಂಡು ಹೊರಗೆ ಕಾಲಿಟ್ಟೆ. ಅಷ್ಟರಲ್ಲಿ ಒಂದು ದೀರ್ಘ ಶ್ವಾಸವು ಕೇಳಿದ ಹಾಗಾ ಯಿತು ತಿರುಗಿ ಒಳಹೊಕ್ಕು ದೀಪದ ಕಡ್ಡಿಯನ್ನು ಹೊತ್ತಿಸಿ ನೋಡಿದೆ. ಲೀಲುವು ನಿದ್ರಿಸಿದ್ದಳು. ಶ್ವಾಸವು ಕ್ರಮವಾಗಿ ಹೊರಡುತ್ತಿತ್ತು. ನೋಡಿಕೊಂಡು ಹೊರಟುಬಂದೆ.

ಆದರೆ, ಇನ್ನೊಂದು ರೀತಿಯ ಸಂಕೋಚವು ಬಾಧಿಸಹತ್ತಿತು. ಹೋಗುವುದೆಲ್ಲಿಗೆ? ಸೀತುವಿನ ಕೊಠಡಿಗೆ. ಛೆ! ಈ ಸಮಯ! ನನಗೇನು ಹುಚ್ಚು ತಾಗಿದೆಯೋ? ನಾಳೆ ಹಗ ಲಿಗೇ ಒಂದು ಅರಗಳಿಗೆ ಸಮಯ ಸಾಧಿಸಿ ಮಾತನಾಡಲಾಗದೆ? ಎಂದು ಚಿಂತಿಸಿ ಹಿಂತಿರುಗು ವಷ್ಟರಲ್ಲಿ ತಿರುಗಿ ಏನೋ ಹೊಳೆಯಿತು. ಹಾಗೆ ಸಾಧ್ಯವಿಲ್ಲ. ಈಗ ಏಳೆಂಟು ದಿನಗಳಿಂದ ಸಾಧ್ಯವಾಯಿತೆ? ಹೀಗೇ ದಿನಗಳು ಮುಂದುವರಿಯುತ್ತಿವೆ. ಇನ್ನು ನಿರೀಕ್ಷಿಸಲು ಸಾಧ್ಯ ವಿಲ್ಲ. ಏನಾದರೊಂದನ್ನು ನಿರ್ಧರಿಸಿಯೇ ಬಿಡಬೇಕು. ಅಲ್ಲದೆ, ಸೀತುವು 'ಬರಲೇಬೇಕು. ಕೆಲಸ ಕೆಟ್ಟೀತೆ'ಂದೂ ಅಂದಿದ್ದಳು. ಹಾಗೆಂದರೇನು? ಯಾವ ಕೆಲಸವು ಕೆಡುವುದು?' ನನ್ನ ಕುರಿತು ಏನು ಅಭಿಸಂಧಿ ನಡೆದಿದ್ದೀತು? ಎಲ್ಲವನ್ನೂ ತಿಳಿಯಲೇಬೇಕೆಂದು ನಿರ್ಧರಿಸಿ' ನಿಸ್ಸಂಕೋಚವಾಗಿ ಇಳಿದು ಹೆಬ್ಬಾಗಲಿಗೆ ಹೋದೆ. ಸೀತುವಿನ ಕೋಣೆಯೊಳಗೆ ಗುಲಗುಂಜಿ ಗಾತ್ರದ ದೀಪವು ಆಗಲೂ ಉರಿಯುತ್ತಿತ್ತು.

ಕೋಣೆಯ ಬಾಗಿಲಿಗೆ ಹೋದೆ ಬಾಗಿಲನ್ನು ತೆರೆಯಲು ಸಂಕೋಚವಾಯಿತು ಆದರೆ, ಅಷ್ಟರಲ್ಲೇ ನಿಶ್ಶಬ್ದವಾಗಿ ಬಾಗಿಲು ತೆರೆಯಲ್ಪಟ್ಟಿತು. ಸೀತುವು 'ಒಳಗೆ ಬನ್ನಿ ಎಂದಳು.

ನಾನು ಸಂಕೋಚದಿಂದ ಒಳಹೊಕ್ಕು 'ನಾನು ಬಂದದ್ದು ಹೇಗೆ ತಿಳಿಯಿತೆಂ'ದೆ.

ಸೀತುವು ದೀಪವನ್ನು ಸ್ವಲ್ಪ ಬೆಳಗಿಸುತ್ತಾ 'ನಿಮ್ಮನ್ನು ಬರಹೇಳಿದ್ದರಿಂದ ನಾನೂ ಇಷ್ಟರ ತನಕ ನಿದ್ದೆ ಹೋಗಿಲ್ಲ ನಿಮ್ಮ ಕಾಲಸಪ್ಪಳದಿಂದ ತಿಳಿಯಿತು' ಎಂದಳು. ನಾನು ಹೆಂಗು ಸರಿಗೆ ಇಂತಹ ಸಂಗತಿಗಳಲ್ಲ ತುಂಬಾ ಸೂಕ್ಷ್ಮ ಬುದ್ಧಿಯಿರುತ್ತದೆಂದಂದುಕೊಂಡೆ. ಆಗ—

ಸೀತು: —ಲೀಲಮ್ಮಗೆ ನಿದ್ದೆ ಬಂದಿದೆಯೋ?

ನಾನು!—ಇಲ್ಲವಾದರೆ ನಾನು ಬರುತ್ತೇನೆಯೋ?

ಸೀತು:—ಚೆನ್ನಾಗಿ ನೋಡಿದಿರಾ?

ನಾನು:—ಅಹುದು. ಅಥವಾ ಆದರಿಂದೇನೀಗ!

ಸೀತು:—ಅಲ್ಲ, ಮೊದಲೇ ಈಗೀಗ ಒಂದು ತೆರನಾಗಿರುವರು. ಬೇಕೆಂದು ಹರಟೆ ಯನ್ನು ಹಚ್ಚಿಸಿಕೊಳ್ಳಲೇಕೆ?

ನಾನು:—ಹೇಗಿದ್ದರೂ ಚಿಂತಿಲ್ಲ ನಿನ್ನ ಸಮಾಚಾರವೇನು? ಹೇಳು.

ಸೀತ: ನನ್ನ ಸಮಾಚಾರವಿರಲಿ ಅದಕ್ಕೆ ತುದಿ-ಮೊದಲಿಲ್ಲ. ಮಾತನಾಡುವ ಕೆಲಸವಿದ್ದುದು ನಿಮಗಷ್ಟೆ. ಅದೇನೋ ಹೇಳೋಣಾಗಲಿ.

ಹೀಗೆಂದು ಹೇಳುತ್ತಾ, ಸೀತುವು ಒಂದು ಕಾಲ್ಮಣೆಯಲ್ಲ ನನ್ನನ್ನು ಕುಳಿತುಕೊಳ್ಳು ವಂತೆ ಸನ್ನೆಮಾಡಿ 'ಕ್ಷಮಿಸಬೇಕು ಖಾವಿಂದ!' ಎಂದನ್ನುತ್ತಾ, ನನ್ನೆದುರಾಗಿ ತಾನೂ ಒಂದು ಕಾಲ್ಮಣೆಯಲ್ಲ ಹತ್ತಿರವಾಗಿ ಕುಳಿತು ಪಿಸುಮಾತಿನಿಂದ 'ಬೇಗನೇ ಹೇಳೋಣಾಗಲಿ' ಎಂದಳು.

ಸೀತುವನ್ನು ಹೇಗಾದರೂ ಒಲಿಸಿಕೊಂಡು ಅವಳಿಂದ ಮಾರ್ಮಿಕವಾದ ಸಂಗತಿಯೇ ನೆಂಬುವನ್ನು ತಿಳಿದುಕೊಳ್ಳಬೇಕೆಂದೆಣಿಸಿ, ಮೃದುವಾಗಿ 'ಸೀತಾ! ನನ್ನಲ್ಲ ನಿನಗೆ ವಿಶ್ವಾಸವಿಡೆ ಯಲ್ಲವೇ?' ಎಂದು ಕೇಳಿದೆ.

ಸೀತು: ಖಾವಿಂದ! ನಿಮ್ಮನ್ನವನ್ನುಣ್ಣುವ ನನ್ನಲ್ಲಿ ಹೀಗೇಕೆ ಕೇಳೋಣಾಗುವುದು?

ನಾನು: ಅನ್ನವನ್ನುಣ್ಣುವುದೇನೂ ದೊಡ್ಡ ಮಾತಲ್ಲ. ಇಂತಹ ಅನ್ನವು ನಿನ ಗೆಷ್ಟೋ! ಅಲ್ಲದೆ ಲೋಕದಲ್ಲ ಉಂಡಮನೆಗೆರಡೆಣ್ಣುವವರೆಷ್ಟು ಮಂದಿ ಇಲ್ಲ! ಆದರೆ ನಿನ ಗಾಗಿ ಹೇಳಿದ್ದಲ್ಲ. ನಿನ್ನ ರೀತಿ ನನಗೆ ಗೊತ್ತು. ಕೇಳಿದೆನೆಂದು ಬೇಸರಪಡಬೇಡ.

ಸೀತ :- ಖಾವಿಂದ! ಲೋಕದ ವಿಚಾರವಿರಲಿ; ನನಗೆ ತಾವು ಹೆಚ್ಚು ಹೇಳಬೇಕಾ ಗಿಲ್ಲ. ಈ ದಾಸಿಯಿಂದ ತಮಗೆ ಸಾಧ್ಯವಿದ್ದಷ್ಟು ಉಪಕಾರವಾದೀತು.

ನಾನು: ಸೀತಾ! ಒಟ್ಟಾರೆ ನೀನು ನನ್ನನ್ನುಳಿಸಬೇಕು.

ಸೀತು: ಹೀಗೆಂದರೇನು? ತೆಗೆಯುವರಾರು? ಉಳಿಸುವರಾರು? ನನಗೊಂದೂ ತಿಳಿ ಯುವುದಿಲ್ಲವಲ್ಲ! ಬಿಡಿಸಿ ಹೇಳೋಣಾಗಲಿ.

ನಾನು:— ಹಾಗಾದರೆ ಕೇಳು, ನಮ್ಮ ಮಿತ್ರರುಗಳೇನಾದರೂ ನಿನ್ನೊಡನೆ ಹೇಳಿರುವರೇ?

ಸೀತು:—ಆವ ವಿಚಾರ?

ನಾನು:—ಜನರೇನಾದರೂ ನನ್ನನ್ನು ಆಡಿಕೊಳ್ಳುವ ವಿಚಾರ.

ಸೀತು:—ಅವರೇನೂ ಹೆಚ್ಚು ಹೇಳಿಲ್ಲ.

ನಾನ :—ಸ್ವಲ್ಪವಾದರೂ ಏನು ಹೇಳಿದ್ದರು?

ಸೀತು:—ನಿಮ್ಮ ಮೇಲೆ ಏನೋ ಜನಾಪವಾದವು ಬಿದ್ದಿದೆ. ಆದರ ಅದೆಲ್ಲಾ ಸುಳ್ಳು. ಸದ್ಯಕ್ಕೆ ಮಾಧವ ಭಟ್ಟರ ಮಗನು ಕೇರಳದೇಶದಲ್ಲಿ ತೀರಿಹೋದುದರ ಕುರಿತೂ, ನೀವು ಈ ಸಂಪತ್ತನ್ನು ಸಂಪಾದಿಸಿದುದರ ಕುರಿತೂ ಮಾಧವ ಭಟ್ಟರಲ್ಲಿ ಏನು ಹೇಳುತ್ತಿರುವರೆಂಬು ದನ್ನು ರಹಸ್ಯವಾಗಿ ತಿಳಿದು ಹೇಳ ಹೇಳಿದ್ದರು. ಬೇರೇನೂ ಇಲ್ಲ.

ನಾನು: - ಅಷ್ಟೇ ಸಾಕು. ನೀನು ಏನನ್ನು ತಿಳಿದೆ?

ಸೀತು: —ಎಂದಿನದೋ ಹಳೇ ವಿಚಾರವನ್ನು ನಾನು ಹೇಗೆ ಕೇಳಿ ತಿಳಿಯಲಿ. ನನ ಗಾವ ಮೊದಲ ವಿಚಾರವೂ ಗೊತ್ತಿರುವುದಿಲ್ಲ.

ನಾನು:—ಆಗಲಿ, ಕಡೆಗೆ ನೀನು ತಿಳಿದಷ್ಟನ್ನು ಹೇಳು.

ಸೀತು:—ನಾನು ಮೊನ್ನೆ ನೀಲಮ್ಮನೊಡನೆ ತುಸುವಾಗಿ ಈ ಸಂಗತಿಯೆತ್ತಿದೆ. ಅವರು ಅವರಿಂದ ಕಣ್ಣೀರುಗೊಂಡು 'ಸೀತು! ಅದೇಕೆ ಮರೆತುದನ್ನೆಲ್ಲಾ ನೆನಸಿಕೊಡುವೆ' ಎಂದು ಎನ್ನು ಮುಖಕ್ಕೆ ಸೆರಗನ್ನು ಮುಚ್ಚಿಕೊಂಡು ಅಳಹತ್ತಿದರು ಉಪಾಯವಿಲ್ಲದೆ ನಾನಾ ಮಾತನ್ನು ಅಲ್ಲಿಗೇ ಬಿಟ್ಟೆ.

ನಾನ :—ಹೋಗಲಿ, ಮುದುಕಿಯೊಡನೆ ಮಾತನಾಡಲಿಲ್ಲವೇ?

ಸೀತು:—ಕಡೆಗೆ ಹಾಗೇ ಮಾಡಿದೆ. ಆದರೆ, ನೀಲಮ್ಮ ಪಾಪದ ಹುಡುಗಿ; ಮುದುಕಿಯಾದರೋ ತಲೆತುಂಬಾ ಹರಟೆಬಿಟ್ಟಿತು.

ನಾನು ಸ್ವಲ್ಪ ಭಯಸಂಕೋಚಗಳಿಂದ 'ಹಾಗೆಂದರೇನು? ಏನು ಹರಟೆತೆ'ಂದೆ. ಸೀತುವು ಬಡವರಿಸುತ್ತಾ ಮುದುಕಿಯು ಹರಟಿದುದರ ಸಾರಾಂಶವನ್ನು ಹೇಳಿದಳು. ಕೇಳಿ ನನ್ನ ಎದೆಯು ಅದುರಿತು ಸೀತುವು 'ಖಾವಿಂದ! ನಾನು ನಿಮಗೆ ತಿಳಿಸಬೇಕೆಂದಿದ್ದುದೂ ಇದೇ ಸಂಗತಿ. ಸ್ವಲ್ಪ ಜಾಗ್ರತೆಯಿಂದಿರುವುದೊಳ್ಳೆಯದು' ಎಂದಳು.

ನಾನು ತುಂಬಾ ಕಳವಳಗೊಂಡು 'ಸೀತು! ಆಗಲಿ; ನೀನದಕ್ಕೆ ಏನಂದೆ?' ಎಂದು ಕೇಳಿದೆ.

ಸೀತು:—ನಾನು ಅರ್ಧಕ್ಕೆ ತಡೆದು ಪೂರಾ ಸುಳ್ಳೆಂದೆ. ಆದರೆ, ಅದರ ಬಾಯನ್ನು ಕಟ್ಟುವವರಾರು? ಅದು ಬಿರುಸಾಗಿ 'ಸುಳ್ಳು! ಸುಳ್ಳು! ಪೋರಿ! ನಿನಗೇನು ಗೊತ್ತು ನನ್ನ ಹೊಟ್ಟೆಯುರಿ. ಎಲ್ಲಾ ಹೊರಪಡಿಸದೆ ಬಿಡುವುದಿಲ್ಲ ನೋಡು ಎಷ್ಟು ದಿನ ಅಡಗಿಸಿಟ್ಟೀರಿ, ಎಷ್ಟು ದಿನ ಮೆರದೀರಿ, ನೋಡುತ್ತೇನೆ ಇಷ್ಟು ದಿನಗಳ ಮೇಲೆ ನನಗೆ ತಿಳಿಯಿತು. ಆದರೂ ಚಿಂತಿಲ್ಲ. ನಮ್ಮ ಮರಿರಾಯನೊಡನೆ ಎಲ್ಲವನ್ನೂ ಹೇಳಿದ್ದೇನೆ. ಇರಲಿ, ಮುದುಕಿಯಾದರೂ ನಾನು ನಿಮ್ಮ ಎಲ್ಲಾ ಚಂದವನ್ನೂ ನೋಡದೆ ಸಾಯುವುದಿಲ್ಲ. ನಿಮ್ಮ ಚಂದವನ್ನು ನೋಡಿ ನನ್ನ ಹೊಟ್ಟೆಯುರಿಯನ್ನು ತಣಿಸಿಕೊಳ್ಳದೆ ಸಾಯುವುದಿಲ್ಲ' ಎಂದು ಕೆರಚುತ್ತಾ, ಹಾಗೆಯೇ 'ದೇವರೇ! ಈ ಪಾಪಿಗಳಿಗೆ ಎಂದು ಪ್ರಾಯಶ್ಚಿತ್ತವನ್ನು ಮಾಡಿ ನನ್ನ ಹೊಟ್ಟೆಯುರಿಯನ್ನು ತಣಿಸುವೆ? ಮಗನೇ! ನಿನ್ನ ಅದೃಷ್ಟವೇ!' ಎಂದು ಮುಂತಾಗಿ ಬೊಕಿಯಿಡತೊಡಗಿತು.

ನಾನು ಇನ್ನಲ್ಲಿರಲಾಗದೆ 'ಏನೋ ಅಮ್ಮಾ! ನನಗೇಕೆ? ನನಗೊಂದೂ ಅರಿಯದು' ಎಂದು ಹೇಳುತ್ತಾ ಕೂಡಲೇ ಹೊರಟುಬಂದೆ.

ಸೀತುವು ಇಷ್ಟೆಂದು ಸಿಲ್ಲಿಸಿದಳು. ನನಗೆ ಮರಿರಾಯನ ಹೆಸರನ್ನು ಕೇಳಿದೊಡನೆ ತಲೆಯು ಇನ್ನಷ್ಟು ಭಾರವಾಯಿತು.

---

## ಹನ್ನೆರಡನೆಯ ಪರಿಚ್ಛೇದ

ನನ್ನ ರಹಸ್ಯವು ಹೊರಪಟ್ಟಿದೆ ಯಾರಿಂದ? ಮುದುಕಿಗೆ ಹೇಗೆ ತಿಳಿಯಿತು? ಸೀತುವು ಪ್ರಸ್ತಾವಿಸುವ ಮೊದಲೇ ಮುದುಕಿಯು ಬಲ್ಲವನ್ನೂ ಹರಟಿದೆಯಲ್ಲ. ಅದಕ್ಕೆ ಯಾರಿಂದ ತಿಳಿದಿರಬಹುದು? ಸೀತುವಿನಿಂದ ಅಪರಾಧವಿಲ್ಲವೇ? ನೊನ್ನೆ ವರೆಗೆ ನನ್ನ ಹೊರತು ಮತ್ತಾರೂ ಇದನ್ನರಿಯರಲ್ಲ. ಹಾಗಾದರೆ ಈ ರಹಸ್ಯವು ಹೊರಪಟ್ಟಿತೆಂತು? ಅಲ್ಲ, ಇದು ನಿಜವಾಗಿಯೂ ಸೀತುವಿನ ಕೆಲಸವೇ. ತಾನು ನಿರಪರಾಧಿನಿಯೆನಿಸಲು ಮುದುಕಿಯು ಹರಟಿತೆನ್ನುತ್ತಿರಬಹುದು. ಸೀತುವು ಬಲು ಜಾಣೆ, ಇಷ್ಟು ಮಾತುಗಳನ್ನೂ ಅವಳು ಕಲ್ಪಿಸಿಯೇ ಹೇಳಬಲ್ಲವಳಾಗಿದ್ದಳು. ಆದರೆ, ಈ ರಹಸ್ಯವನ್ನು ಭೇದಿಸಲೆಂತು? ಸೀತುವನ್ನು ಸ್ವಲ್ಪ ಬಿರುಸಾಗಿ ಕೇಳಿನೋಡಲೇ ಆಕೆಯನ್ನು ನೋಯಿಸಿಯೂ ಕ್ಷೇಮವಿಲ್ಲ. ತಾನು ಅಷ್ಟು ವಿನಯದಿಂದ ಮಾತನಾಡಿದರೂ ಆಕೆಯನ್ನು ನಾನು ಪೂರ್ಣ ನಂಬುವಂತಿಲ್ಲ ಶೀಲವನ್ನು ಕಾಪಾಡಿಕೊಳ್ಳುವ ಸ್ಥೈರ್ಯವಿಲ್ಲದ ಹೆಂಗುಸನ್ನು ನಂಬುವುದೆಂತು. ಸೀತುವಿನ ಜಾಣತನವೊಂದೆಡೆ, ಶೀಲವೊಂದೆಡೆಯಾಗಿತ್ತು. ಯೌವನದ ವೇಗವನ್ನು ತಡೆಯಲಾರದೆ ಹೆಣ್ಣು ಶೀಲವನ್ನು ಮಾರಿಕೊಂಡಿತ್ತು. ಕಾಮವಿಕಾರಕ್ಕೆ ತುತ್ತಾದ ಸ್ತ್ರೀ-ಪುರುಷರು ತಮ್ಮ ಹಿತಾಹಿತಗಳನ್ನೇ ಅರಿಯುವುದಿಲ್ಲ. ಪರರ ಹಿತಾಹಿತಗಳನ್ನೆಂತು ಕಾಣುವರು! ಸೀತುವಾದರೂ ಕಾಮದ ಪ್ರೇರಣೆಯಂತೆ ಹೋಗತಕ್ಕವಳು. ಅವಳನ್ನು ಕೆಣಕಿ ಪ್ರಯೋಜನವೇನು?

ನಿಜವಾಗಿಯೂ ನನ್ನ ರಹಸ್ಯವು ಸೀತುವಿನಿಂದಲೇ ಹೊರಪಟ್ಟಿದೆ. ಮೊದಲು ಲೀಲಿಯೊಡನೆ ಹೇಳಿರಬಹುದು. ಲೀಲಿಯಿಂದ ಮುದುಕಿಗೆ ತಿಳಿದಿರಬೇಕು. ಇನ್ನೇನು? ಬಂದುದನ್ನೆಲ್ಲಾ ಅನುಭವಿಸಲು ಸಿದ್ಧನಾಗಿದ್ದರಾಯಿತು. ಸೀತುವಿನಂತಹ ಕಾಮುಚಾರಿಣಿಗೆ ತಿಳುಹಿಸಿದವರಾರು? ಅಪರಾಧಿಯು ನಾನೇ; ನಾನೇಕೆ ಇಂತಹ ರಹಸ್ಯವನ್ನು ಬಯಲುಗೊಳಿಸಿದೆ.

ಹೀಗೆಲ್ಲಾ ವಿಚಾರವಿಕಲ್ಪಗಳು ಮೂಡುತ್ತಿರಲು ಕ್ಷಣಹೊತ್ತು ಸುಮ್ಮನಿದ್ದು ಕೇಳಿದೆ 'ಸೀತು! ಮುದುಕಿ ಹರಟಿದುದನ್ನೆಲ್ಲಾ ನೀನು ನಿಜವೆಂದೆಣಿಸುವೆಯಾ?'

ಸೀತು!—ನಿಜವೋ ಸುಳ್ಳೋ ಎಂದು ನಿರ್ಣಯಿಸುವ ಶಕ್ತಿ ನನಗಿಲ್ಲ ಅಂತೂ ಒಳ್ಳೇದಾಗಿರುವವರನ್ನು ಕಂಡರೆ ಅಲ್ಪರಿಗೆ ಹೊಟ್ಟೆಕಿಚ್ಚು ಸಹಜವಾದುದು. ನೀವೊಂದು ರೀತಿಯಲ್ಲಿದ್ದೀರೆಂತ ಆ ಮುದುಕಿ ಕಿಚ್ಚಿನಿಂದ ಸುಡಹತ್ತಿದೆ. ನಾವೇನು ಮಾಡೋಣ.

ನಾನು:— ಸೀತಾ! ನೀನೆಂದುದು ಸುಳ್ಳಲ್ಲ. ಅಲ್ಲದ ಸಲ್ಲದ ಅಪವಾದಗಳನ್ನ ಯಾರಲ್ಲಾದರೂ ಹೊರಿಸಿ ಬೊಗಳುತ್ತಿರುವುದೇ ದುರ್ಜನರ ಸ್ವಭಾವ. ಇರಲಿ, ಈ ವಿಚಾರವನ್ನಿಲ್ಲಗೇ ನಿಲ್ಲಿಸುವ. ಇನ್ನಾರ ಮುಂದೆಯೂ ಈ ವಿಚಾರವನ್ನ ನೀನು ಎತ್ತುವುದೂ ಬೇಡ ಅವರ ಮನೆ ಕಡೆಗೆ ಹೋಗುವುದೂ ಬೇಡ. ಕಂಡೆಯಾ?

ಸೀತುವು ಅಷ್ಟರಲ್ಲ 'ಆಗಲಿ' ಎಂದು ತಲೆಯನ್ನಲ್ಲಾಡಿಸಿದಳು. ನಾನು 'ಇಷ್ಟೇ ವಿಚಾರ ಸೀತು. ಇನ್ನೇನೂ ಇಲ್ಲ ಹೊತ್ತಾಯಿತು. ನಾನು ಹೋಗುತ್ತೇನೆ' ಎಂದು ಮೆಲ್ಲಗೆ

ಎದ್ದೆ. ಹಾಗೂ ಸೀತು! ಎಷ್ಟು ಬೇಕಾದವರಿದ್ದರೂ ಈ ಸಂಗತಿಯ ಕುರಿತು ಖಂಡಿತವಾಗಿ ಚಾ ಚೂ ಎತ್ತಬಾರದು ಸುಳ್ಳೇ ಆದರೂ ಅಪವಾದವು ದೊಡ್ಡದು, ಅದರ ಪರಿಣಾಮವು ಹೇಗಿದ್ದರೂ ಮೊದಲಿಗೆ ನಾವೆಲ್ಲರೂ ಕಷ್ಟಕ್ಕೊಳಗಾಗಬೇಕಾಗುವುದು. ಒತ್ತಿ ಹೇಳಿದೆನೆಂದು ಬೇಸರ ಪಡಬೇಡ'ವೆನ್ನುತ್ತಿರಲು ಸೀತುವು ಏನನ್ನೋ ಆಲಿಸುವವಳಂತೆಯೂ, ಇನ್ನೊಮ್ಮೆ ಕಿಟಕಿ ಸಂದು ಆಚೆ ಈಚೆ ನೋಡುವಂತೆಯೂ ಕಂಡುಬಂದಿತು. ನಾನು ಆಗಲೆ ಹೊರ ಹೊರಡುವುದರಲ್ಲಿದ್ದೆ ಅಷ್ಟರಲ್ಲಿ ಸೀತುವು 'ಓಹೋ' ಎಂದು ಮುಖವನ್ನು ಸೊಟ್ಟಮಾಡಿ ಬಗ್ಗಿ ಕುಳಿತುಕೊಂಡಳು. ಅದನ್ನು ಕಂಡು ನಾನು 'ಏನು? ಏನಾಯಿತೆಂ'ದು ಕಳವಳ ಗೊಂಡು ಕೇಳಿದೆ ಅದಕ್ಕವಳು 'ಏನೂ ಇಲ್ಲ. ಈಗ ನೀವು ಬೇಗನೇ ಇಲ್ಲಿಂದ ಹೊರಡಿರಿ ಏನೆಂಬುದನ್ನು ನಾಳೆ ಹೇಳುತ್ತೇನೆ' ಎಂದು ನನ್ನನ್ನು ಕಳುಹಿಸಿ, ಸದ್ದಿಲ್ಲದೆ ಬಾಗಿಲನ್ನಿಕ್ಕಿ ಕೊಂಡಳು.

ನನಗೆ ಕುತೂಹಲವು ಹೆಚ್ಚಿದ್ದರೂ ಉಪಾಯವಿಲ್ಲದೆ ಅಲ್ಲಿಂದ ಹೊರಟು ಮೆಲ್ಲಗೆ ಅಂಗಳವನ್ನಿಳಿದೆ. ಚಾವಡಿಯನ್ನು ಹತ್ತುವಷ್ಟರಲ್ಲಿ ಯಾರೋ ನನ್ನ ಮುಂದೆ ನಡೆದು ಹೋದಂತಾಯಿತು. ಈ ಅಂಧಕಾರದಲ್ಲಿ ನನ್ನಂತೆ ಇನ್ನಾರು ತೊಳಲುತ್ತಿರಬಹುದು ಲೀಲೆಯು ಎದ್ದಿರಬಹುದೆ? ಛೆ! ಈಗ ಗಾಢ ನಿದ್ದೆಯಲ್ಲಿದ್ದವಳನ್ನು ನೋಡಿ ಬಂದಿದ್ದೆನಲ್ಲ! ನನ್ನ ಮೈಯು ರೋಮಾಂಚಗೊಂಡು ಬೆವರಿತು. ಹೊರಗಿನಿಂದ ಯಾರಾದರೂ ಕಳ್ಳರು ನನ್ನ ಮನೆಯನ್ನು ಹೊಕ್ಕಿರಬಹುದೆ? ಆಯುಧಪಾಣಿಗಳಾದ ದರೋಡೆಗಾರರು ನನ್ನ ಮನೆ ಯನ್ನು ನುಗ್ಗಿರುವರೇ? ಹಾಗಿದ್ದಲ್ಲಿ ಮುಂದುವರಿಯುವುದೂ ಅಪಾಯಕರ. ತಿರುಗಿ ಸೀತು ವಿನ ಕೋಣೆಗೇ ಹೋಗಿ ಈ ವಿಚಾರವನ್ನು ತಿಳಿಸಲೇ? ಅಲ್ಲೂ ಏನೋ ತೊಂದರೆಯಿರ ಬೇಕು. ಆಕೆಯು ಬೇಗನೇ ಇಲ್ಲಿಂದ ಹೊರಡಿ ಯೆಂದುದೇಕೆ? ಇಂತಹ ಸಂಗತಿಯನ್ನೇ ನಾದರೂ ತಿಳಿದೇ ಹಾಗೆಂದಿರಬಹುದೇ? ಛೆ! ನಾನೇಕೆ ಈ ರಾತ್ರಿವೇಳೆಯಲ್ಲೀ ಕೆಲಸವನ್ನಿಟ್ಟು ಕೊಂಡೆನೆಂದೆನಿಸಿತು. ಒಂದು ನಿಮಿಷ ಹಿಂದೂ ಮುಂದೂ ಚಲಿಸಲಾರದೆ ಸ್ತಬ್ಧನಾಗಿ ನಿಂತಲ್ಲೇ ನಿಂತುಬಿಟ್ಟೆ.

---

## ಎಂಟನೆಯ ಪರಿಚ್ಛೇದ

ಆ ಅಂಧಕಾರದಲ್ಲಿ ನಾಲ್ಕೂ ಕಡೆಗೂ ಒಮ್ಮೆ ನೋಡಿದೆ. ಆಕಾಶದಲ್ಲಿ ಕೆಲ ನಕ್ಷತ್ರ ಗಳು ಮಿನುಗುತ್ತಿದ್ದುವು. ಮನೆ, ಮಾಡು, ಹೊರಗಿನ ಮರಗಳಾವುವೂ ಬೇರೆಬೇರೆಯಾಗಿ ಕಾಣುತ್ತಿದ್ದಿಲ್ಲ. ದೂರದಲ್ಲಿ ಸೀತುವಿನ ಕೋಣೆಯ ಕಿಟಕಿಯಿಂದ ಒಂದು ಸಣ್ಣ ಪ್ರಭೆಯು ಹೊರ ಚಾಚಿತ್ತು. ಹೆಬ್ಬಾಗಿಲಿನ ಹೊರಗೆ ಏನೋ ಡುಬ್ಬೆಂದು ಶಬ್ದವು ಕೇಳಿಸಿತು. ಅಲ್ಲೊಂದು ಹಣ್ಣು ತುಂಬಿದ ಮಾವಿನ ಮರವೂ ಇತ್ತು. ಇನ್ನೇಲ್ಲೂ ಯಾವ ಸದ್ದೂ ಇಲ್ಲ. ಮನೆಯೊಳಗೂ ಯಾರೂ ಸುಳಿದಾಡುತ್ತಿಲ್ಲ. ಛೆ! ನಾನು ಭ್ರಾಂತಿಗೊಂಡಿರಬ ಹುದೆ? ನನ್ನ ಸಂಶಯಗಳೇ ನನ್ನನ್ನು ಹೆದರಿಸುತ್ತಿರಬಹುದೇ ಎಂದೆನಿಸಿತು. ಅಥವಾ ಕತ್ತಲೆಯಲ್ಲಿ ಯಾರೂ ಕಪ್ಪಾಗಿ ಹೊದ್ದುಕೊಂಡಿದ್ದನ್ನು ಕಂಡೆನಲ್ಲ! ಅದು ಮನುಷ್ಯನಲ್ಲವೆ ಇನ್ನೇ!

ಇನ್ನೇನು? ಒಂದೋ ಲೀಲೆಯೇ ಎದ್ದಿರಬೇಕು. ಇರಲಿ, ನೋಡೋಣವೆಂದಂದುಕೊಂಡು ಚಾವಡಿಯನ್ನು ಹತ್ತಿ ಮಲಗುವ ಕೋಣೆಗೆ ಹೋದೆ.

ನಾನು ಬರುವಾಗ ಬಾಗಿಲನ್ನು ತೆರೆದಿಟ್ಟು ಬಂದುದು ಹಾಗೆಯೇ ಇತ್ತು. ಒಳಹೊಕ್ಕು ಬಾಗಿಲನ್ನಿಕ್ಕಿ ದೀಪವನ್ನು ಹೊತ್ತಿಸಿದೆ. ಲೀಲೆಯು ಮಲಗಿಯೇ ಇದ್ದಳು. ಆದರೆ, ನಾನು ಆಗ ನೋಡಿದ ಮಗ್ಗುಲಾಗಿರದೆ ಇನ್ನೊಂದು ಮಗ್ಗುಲಾಗಿ ಮಲಗಿದ್ದಳು. ನಿದ್ದೆ ಹೋಗಿದ್ದಂತೆ ಕಂಡಿತು. ದೀಪವನ್ನು ಮುಖದ ಹತ್ತಿರಕ್ಕೆ ಹಿಡಿದು ನೋಡಿದೆ. ಕಣ್ಣುಗಳು ಮುಚ್ಚಿದ್ದರೂ ವಿಶ್ರಾಂತಿಗೊಂಡಿದ್ದಂತಿಲ್ಲ ಅಲ್ಲದೆ, ದೀಪದ ಪ್ರಭೆಯನ್ನು ಸಹಿಸದೆ ಮುಖವು ಸ್ವಲ್ಪ ತಗ್ಗಿತು. ಇದರಿಂದ ಲೀಲೆಯು ಕೃತಕ ನಿದ್ದೆಯಲ್ಲಿರುವಳೆಂದು ಕಂಡು ಬಂತು. ಇವಳೇ ಕೆಳಗೆ ಬಂದಿರಬಹುದೆಂಬ ಸಂದೇಹವೇ ಬಲವಾಯಿತು.

'ಲೀಲು!' ಎಂದು ಕರೆದೆ, ಮಾತಾಡಲಿಲ್ಲ. ಭುಜವನ್ನು ತಡವರಿಸಿ ತಿರುಗೊಮ್ಮೆ 'ಲೀಲು!' ಅಂದೆ, ಭುಜವು ಅದುರಿತು. ಮಾತು ಹೊರಡಲಿಲ್ಲ. ತಿರುಗೊಮ್ಮೆ ಮೈಯನ್ನು ಕುಲುಕಿ 'ಲೀಲಾ!' ಎಂದು ಕೂಗಿದೆ.

ಆಗ ಮಾತ್ರ ಲೀಲೆಯು ಕಣ್ತೆರೆದು ನಿಡುಗಣ್ಣಿನಿಂದ ನನ್ನನ್ನು ನೋಡಿ 'ಏಕೆ? ಎಂದಳು ನಾನು 'ಈ ನಿದ್ದೆಯ ಸೋಗು ಏತಕ್ಕಾಗಿ?' ಎಂದು ಕೇಳಿದೆ. ಅದಕ್ಕೆ ಲೀಲೆಯು 'ನನ್ನಿಂದ ಯಾರಿಗೂ ತೊಂದರೆಯಾಗಬಾರದೆಂದು ಸುಮ್ಮನೆ ಬಿದ್ದಿರುವೆನಷ್ಟೆ.' ಎಂದಳು

ನಾನು:—ಇರಲಿ, ಲೀಲಾ! ನೀನೀಗ ಕೆಳಗೆ ಹೋಗಿ ಬಂದೆಯಾ?

ಲೀಲೆ: —ಏಕೆ?

ನಾನು:—ಈಗೊಂದಾಪತ್ತು ಒದಗಿದೆ. ಮನೆಗೆ ಕಳ್ಳರು ಪ್ರವೇಶಿಸಿದಂತಿದೆ.

ಲೀಲೆಯು ಈ ಮಾತಿನಿಂದೇನೂ ಕಳವಳಗೊಳ್ಳಲಿಲ್ಲ. ನಾನು ತಿರುಗಿ 'ಹೇಳು ಲೀಲಾ! ಈಗ ಕೆಳಗೆ ಹೋಗಿ ಬಂದೆಯಾ?' ಎಂದು ಕೇಳಿದೆ. ಲೀಲೆಯು 'ನಾನೆಲ್ಲಿಗೂ ಹೋಗಿಲ್ಲ'ವೆಂದಳು.

ನಾನು:—ನಾನು ಜಲಬಾಧೆಯನ್ನು ತೀರಿಸಲು ಹೊರಗೆ ಹೋಗಿದ್ದೆ. ತಿರುಗಿ ಬರುವಾಗ ಯಾರೋ ನನ್ನ ಮುಂದೆ ನಡೆದಂತಾಯಿತು. ನೀನೇ ಆಗಿರಬಹುದೆಂದೆಣಿಸಿದೆ. ನೀನಲ್ಲವೇ?

ಲೀಲೆ:—ಯಾರಾದರೂ ಕಳ್ಳರಾಗಿರಬಹುದು. ಕಳ್ಳರು ನುಗ್ಗಿರುವರೆಂದಿರಲ್ಲ.

ನಾನು:—ನೀನೇ ಆಗಿದ್ದರೆ ಚಿಂತಿಲ್ಲ. ನೀನಲ್ಲವಾದರೆ ಅದು ಕಳ್ಳರೇ ಎಂದು ಸಿದ್ಧವಾಗುವುದು. ಬೇರಾರೂ ಈ ಕಡೆ ಬಾಗಿಲಲ್ಲಿ ಏಳುವವರಿಲ್ಲ.

ಲೀಲೆ:— ನಾನಲ್ಲ, ಕಳ್ಳರೇ ಆಗಿರಬೇಕು. ಇನ್ನೊಮ್ಮೆ ಹೋಗಿ ಹುಡುಕಿ ಬನ್ನಿರಿ. ನಾನು ನಿದ್ದೆ ಮಾಡುತ್ತಿರುವೆನು.

ನಾನು: —ಅಲ್ಲ, ಅದು ನೀನೇ ನಿಶ್ಚಯ. ಕಳ್ಳರಾರೂ ಈ ವರೆಗೆ ನಮ್ಮ ಮನೆಗೆ ನುಗ್ಗಿದ್ದಿಲ್ಲ.

ಲೀಲೆ:—ನಿಮಗೆ ಭ್ರಾಂತಿಯುಂಟಾಗಿದೆ. ಹೆಂಗುಸೇ ಆಗಿದ್ದಲ್ಲಿ ಅದು ಸೀತುವಾಗಿರ ಬಹುದು. ನೀವು ಆಕೆಯನ್ನು ಕಂಡು ನಾನೆಂದು ಭ್ರಮಿಸಿದ್ದೀರಿ. ಹೋಗಿ ವಿಚಾರಿಸಿ ಬನ್ನಿ, ಸೀತುವು ಇಷ್ಟು ಬೇಗ ಮಲಗಿರಲಾರಳು, ಪಾಪ! ಸ್ವಲ್ಪ ವಿಚಾರಿಸಿ ಬನ್ನಿ.

ಪ್ರಿಯಪಾಠಕ! ಲೀಲುವಿನ ಉತ್ತರಗಳ ಮರ್ಮವು ತಿಳಿಯಿತಲ್ಲವೇ? ಎಷ್ಟೊಂದು ನಂಜು ತುಂಬಿರುವುದು ಆಕೆಯು ನನ್ನನ್ನು ಹಿಂಬಾಲಿಸಿ ಎಲ್ಲವನ್ನೂ ತಿಳುಕೊಂಡಿರುವ ಳೆಂದು ಈಗ ನಿಶ್ಚಯವಾಯಿತು. ಆದರೆ, ನನ್ನಲ್ಲಿ ತುಂಬಾ ದುರಭಿಪ್ರಾಯವನ್ನೂ ಹೊಂದಿರುವಳು. ಛೆ! ಏನು ಮಾಡಿದೆ.

---

## ಒಂಭತ್ತನೆಯ ಪರಿಚ್ಛೇದ

ಲೀಲೆಯನ್ನು ನಾನು ವಂಚಿಸಿದೆನೆ? ಇಲ್ಲ, ಸದ್ಯಕ್ಕೆ ಯಾವ ಅನೀತಿಯೂ ಘಟಿಸಿಲ್ಲ. ಸೀತುವೊಡನೆ ನನ್ನ ಮಾತನ್ನಷ್ಟು ಪೂರೈಸಿಕೊಂಡು ಬಂದಿದ್ದೆ ಅಂದ ಮೇಲೆ ಲೀಲೆಯು ಇಷ್ಟು ಬಿರುಸಾಗಿರುವಳೇಕೆ?

ನನ್ನ ಜೀವಿತ ರಹಸ್ಯವನ್ನೇ ಲೀಲೆಯು ಬಹಿರಂಗ ಪಡಿಸಿದಳು. ಆದರೂ ನಾನು ಲೀಲೆಗೆ ಮುನಿದಿಲ್ಲ. ಹೆಂಗುಸಿಗೆ ಸ್ವಲ್ಪ ವಿಚಾರ ಬುದ್ಧಿಯಿರಬೇಕೆಂಬುದನ್ನು ಮನಗಾಣ ಲೆಂದು ಸ್ವಲ್ಪ ಮಟ್ಟಿಗೆ ತಿರಸ್ಕಾರವನ್ನು ತೋರಿಸಿದ್ದೆ. ಇಷ್ಟರಿಂದಲೇ ಹುಡುಗಿಯು ಒಳ ಗೊಳಗೇ ಬೇಯ ಹತ್ತಿದೆಯೆಂದೂ ನನಗೆ ತಿಳಿದು ಬಂದಿದೆ. ಹೇಗಾದರೂ ನನ್ನ ಮುನಿಸು ಇಳಿದು ಮನಸು ತಿಳಿಯಾಗಲೆಂದಾಕೆಯು ಹೆಚ್ಚಾದ ದೈನ್ಯ ಭಾವದಿಂದ ನನ್ನೊಡನೆ ವ್ಯವ ಹರಿಸಹತ್ತಿದ್ದಳು. ಆದರೆ, ಇಂದು! ಲೀಲೆಗೇ ನಾನು ಅಪರಾಧಿಯಾದೆನೇ? ಅನ್ಯಾಯವಾಗಿ ತಪ್ಪು ತಿಳುವಳಿಕೆಯಿಂದ ಲೀಲೆಯು ನನ್ನಲ್ಲಿ ಮುನಿದಿರುವಳೇ? ಆಹಾ! ಅವಳಮಾತುಗಳೇ! ಎಷ್ಟೊಂದು ಭಾರವಾದ ಮಾತುಗಳವು!

ನಾನು ಮುಂದೆ ಮಾತನಾಡಲಿಲ್ಲ. ಸಂತಾಪದಿಂದ ನನಗೆ ಮುಂದೇನು ಮಾತನಾಡ ಬೇಕೆಂದು ತೋರಲೂ ಇಲ್ಲ. ಸೀತುವು ಲೀಲಮ್ಮಗೆ ಚನ್ನಾಗಿ ನಿದ್ದೆ ಬಂದಿದೆಯಲ್ಲವೆ ನೋಡಿ ದ್ದೀರಾ! ಎಂದು ಕೇಳಿದುದು ಇದೇ ಕಾರಣದಿಂದಾಗಿರಬಹುದೆಂದೆಣಿಸಿದೆ. ಹೆಂಗುಸಿನ ಭಾವ ಹೆಂಗುಸಿಗೇ ಚನ್ನಾಗಿ ತಿಳಿಯ ಬಹುದೇನೋ. ಇಷ್ಟಾದರೂ ಲೀಲೆಯು ತಪ್ಪು ತಿಳುಕೊಂಡಿ ರುವಳು. ನನ್ನನ್ನು ಹಿಂಬಾಲಿಸಿ ನಮ್ಮ ಸಂಭಾಷಣೆಯನ್ನು ಆಲಿಸಿದ್ದೇ ನಿಜವಾದರೆ, ಆಕೆಗೆ ಇಷ್ಟು ಕಳವಳಕ್ಕೆ ಕಾರಣವೇನು? ನಿಜವಾಗಿಯೂ ಅವಳು ಪೂರ್ಣ ವಿಚಾರವನ್ನು ಮಾಡಿಲ್ಲ. ನಾನಾ ರೀತಿಯ ಬೇಸರಗಳಿಂದಲೂ ಆಯಾಸದಿಂದಲೂ ಅಲ್ಲೇ ಹಾಸಿಗೆಯಲ್ಲುರುಳಿ ಅಂದಿನಿರುಳು ಹೇಗೋ ಹಾಗೆ ಕಳೆದೆ ಮುಂಜಾನೆ ಸ್ವಲ್ಪ ಕಣ್ಣಿಗೆ ಆಲಸ್ಯ ಹತ್ತಿದ್ದಾಗ ಕಿಟಕಿಯ ಸಂದಿನಲ್ಲಿ ಎರಡು ಕಾಗೆಗಳು ಕರ್ಣಕರ್ಕಶವಾಗಿ ಕೂಗ ತೊಡಗಿದ್ದವು.

ಈ ಸಂಗತಿ ನಡೆದು ಮೂರು ನಾಲ್ಕು ದಿನಗಳು ದಾಟಿರಬಹುದು. ಒಂದು ದಿನ ನಮ್ಮಮ್ಮನು ಬಂದು 'ಲೀಲೆಗೇನಂದಯೋ ಕೇಶವಾ! ಒಂದು ರೀತಿ ಉದಾಸೀನಳಾಗಿರುವಳು.

ಆಗಳೊಮ್ಮೆ ಕೋಣೆಯೊಳಗೆ ಹೋಗಿ ಅಳುತ್ತಲೂ ಇರುವಳು! ಅದೇಕೋ?' ಎಂದು ಕೇಳಿದಳು.

ಅದಕ್ಕೆ ನಾನು 'ಏನೂ ಇಲ್ಲಮ್ಮ. ನನ್ನ ಗುಟ್ಟಿನ ಸಂಗತಿಯೊಂದನ್ನು ಬಯಲುಗೊಳಿಸಿರುವಳು. ಅದಕ್ಕೊಂದಿಷ್ಟು ಗದ್ದರಿಸಿದ್ದೆ. ಬೇರೇನೂ ಇಲ್ಲ'ವೆಂದೆ. ಆಗ ಅಮ್ಮನು ಹತ್ತಿರ ಬಂದು 'ಹೌದೇನೋ ಕೇಶವಾ! ಆ ಮುದುಕಿ ವೆಂಕಮ್ಮನ ಬೈಗಳು ಈಗೀಗ ತೀರ ಹೆಚ್ಚಿದೆಯಂತೆ, ನಾವೇನು ಮಾಡಿದೆವೋ ಅದಕ್ಕೆ.' ಎಂದೂ ಕೇಳಿದಳು.

ನಾನು ಸ್ವಲ್ಪ ಸಂಕೋಚದಿಂದ 'ಇರಲಮ್ಮ, ಬಯ್ಯಲಾರೆನೆಂದಿರಬಹುದು, ಬೈಗಳು ಕೇಳಲಾರೆನೆಂದಿರಲಾಗದಂತೆ, ಏನು ಮಾಡೋಣ ಹೇಳು, ಅದಕ್ಕೆ ಎಪ್ಪತ್ತರ ಅರುಳು ಮರುಳು. ನಮ್ಮನ್ನು ಮೆಚ್ಚದ ಚಾಡಿಗಾರರಿಗೂ ಕಡಿಮೆಯಿಲ್ಲ. ಇನ್ನೇನ ಕೇಳುವೆ'ಯೆಂದು ಸಮಾಧಾನ ಪಡಿಸಿದೆ. ಆಗ ಅಮ್ಮನು 'ನಿನ್ನ ತಲೆನೋವು ಹೇಗಿದೆ ಹೇಳು' ಎಂದಳು. ನಾನು 'ಸ್ವಲ್ಪ ಕಡಿಮೆಯಾಗಿದೆಯಮ್ಮಾ' ಎಂದನ್ನುತ್ತಿರಲು 'ನೋಡು, ಲೀಲೆಯೊಡನೆ ಎಣ್ಣೆ, ಕಾಯಿಸ ಹೇಳಿದ್ದೇನೆ. ನೀರೂ ಕಾದಿದೆ, ಒಂದಿಷ್ಟು ತಲೆಗೆರಕೋ. ಪೂರ ವಾಸಿಯಾಗುತ್ತೆ. ಎಂದು ಹೇಳಿ ಅಮ್ಮನು ತನ್ನ ಕೆಲ್ಸಕ್ಕೆ ಹೊರಟು ಹೋದಳು.

ಆದರೆ ಲೀಲೆಯೇಕೆ ಇಷ್ಟೊಂದು ಕೊರಗುತ್ತಿರುವಳು?

---

# ಹತ್ತನೆಯ ಪರಿಚ್ಛೇದ

ಲೀಲಗೇನಾಯಿತು? ಅವತ್ತು ನನಗೆ, ಕೊರಗುವುದು ಲೀಲೆಯೇ! ಏತಕ್ಕಾಗಿ?

ಇದ್ದ ಕರಕರೆಯೇ ಹೆಚ್ಚಾಗಿತ್ತು. ಅದರೊಳಗಿದೊಂದೆಂದಂದುಕೊಂಡೆ. ನಾನೇನು ಮಾಡಲಿ, ನನ್ನಿಂಡೇನೂ ತಪ್ಪಿಲ್ಲ. ಆ ವೇಳೆಗೆ ಸೀತುವೊಡನೆ ಮಾತನಾಡ ಹೋದುದು ತಪ್ಪೆ? ನನಗಷ್ಟು ಸ್ವಾತಂತ್ರ್ಯವಿಲ್ಲವೆ? ನನ್ನ ಒಳ್ಳೆದನ್ನೊ ಕೆಟ್ಟದನ್ನೊ ಕುರಿತು ನಾನು ಹೇಗಾದರೂ ವಿಚಾರ ನಡೆಸಬಾರದೆ? ಆಗಲಿ, ಆದುದಾಗಿ ಹೋಯಿತು. ಇನ್ನು ಲೀಲೆಯನ್ನು ಕೊರಗಿಸುವುದರಿಂದೇನು? ಎಲ್ಲವನ್ನೂ ಸ್ಪಷ್ಟವಾಗಿ ಹೇಳಿ ಕೇಳಿ ಆಕೆಯನ್ನು ಸಮಾಧಾನಗೊಳಿಸಬೇಕು ಹಾಗಾದರೆ ಸದ್ಯಕ್ಕೊಂದು ಹರಟೆಯಾದರೂ ತೀರಿದಂತಾದೀತೆಂದೆಣಿಸಿದೆ.

ಅಂದು ರಾತ್ರಿ ಎಲ್ಲರೂ ಉಂಡು ಮಲಗಿದ್ದರು. ನಾನೂ ನನ್ನ ಕೊಠಡಿಯಲ್ಲಿ ಹೋಗಿ ಮಲಗಿದೆ. ಲೀಲೆಯೂ ಒಳಗೆ ಬಂದವಳು ಹಾಸು ಹೊದಿಕೆಗಳನ್ನೂ ಕೂಡ ಆರಿಸಿ ಕೊಳ್ಳದೆ ಒಂದು ಬದಿಯಲ್ಲಿ ಹೋಗಿ ಮಲಗಿಕೊಂಡಳು. ಕೋಣೆಯೊಳಗೆ ಸಣ್ಣಾಗಿನ ದೀಪವೊಂದು ಮಿನುಗುಟ್ಟುತ್ತಿತ್ತು

ತುಸು ಹೊತ್ತು ಬಿಟ್ಟು 'ಲೀಲಾ!' ಎಂದು ಕರೆದೆ. ಲೀಲೆಯು ಮಲಗಿದ್ದಂತೆಯೇ 'ಉ' ಎಂದಳು.

ನಾನು 'ನಿನಗೇನಾಗಿದೆ ಹೇಳು. ನೆಲದಲ್ಲೇಕೆ ಬಿದ್ದಿರುವೆ'ಯೆಂದು ಕೇಳಿದೆ. ಲೀಲೆಯು ಮಾತನಾಡಲಿಲ್ಲ. ಆಗ ನಾನು 'ನೋಡು ಲೀಲಾ! ನಿನಗೆ ಬುದ್ಧಿ ಸಾಲದು. ಏನೇನೋ

ತಿಳುಕೊಂಡು ಸುಮ್ಮನೆ ನೀನು ಕೊರಗುವೆ. ನನ್ನನ್ನು ಕೊರಗಿಸುವೆ'ಯೆಂದೆ.

ಅದಕ್ಕೂ ಉತ್ತರವಿಲ್ಲ.

'ನೋಡು ಲೀಲಾ! ಇದು ಕೊನೆಯ ಮಾತು, ಎಲ್ಲವನ್ನೂ ತಿಳಿಯ ಬೇಕೆಂದಿದ್ದೇನೆ. ನಾಳೆಗೆ ನಾನು ಹೊರಡಬೇಕಾಗಿದೆ.' ಎಂದು ತಿರುಗಿ ಕೇಳಲು ಲೀಲೆಯು ಮಲಗಿದಲ್ಲೇ 'ಎಲ್ಲಗೆ?' ಎಂದಳು.

ನಾನು:—ಎಲ್ಲಿಗೆಂದರೆ! ನೆಲಹಿಡಿದು ಮಲಗಿದವಳಲ್ಲಿ ಹೇಗೆ ಮಾತನಾಡುವುದು? ಈ ಕಡೆ ಬಾ! ಹೇಳುವೆನು.

ಲೀಲೆಯ ಮುನಿಸು ಕೊಂಚ ಇಳಿದಿರಬೇಕು. ಹೇಗೂ ಉರುಳಿಯುರುಳಿ ಹತ್ತಿರ ಬಂದಳು.

ನಾನು:—'ಈಗೀಗ ನಿನಗೇನಾಗಿದೆ ಹೇಳು. ಹೆಂಗುಸು ಯಾವಾಗಲೂ ಚನ್ನಾಗಿ ವಿಚಾರಮಾಡಿ ತಿಳುಕೊಳ್ಳಬೇಕು. ನನಗೀಗೊದಗಿದ ಆಪತ್ತೇ ಸಾಕಾಗಿದೆ. ಅದರಲ್ಲಿ ನಿನ್ನದಿದೊಂದು ಪಿಕಲಾಟ. ಒಟ್ಟಾರೆ ನಾನಾರಿಗೂ ಬೇಡವಾದೆನಲ್ಲವೇ?ನಾನಿನ್ನೇಕೆ ಇಲ್ಲಿರಲಿ? ಲೀಲಾ! ನಾಳೆ ನಾನು ಹೊರಡುವುದು ನಿಶ್ಚಯ'ವೆಂದೆ.

ಲೀಲೆ:—ನಾನೇನ ಮಾಡಿದೆ? ಹೊರಡುವುದೆಲ್ಲಿಗೆ?

ನಾನು:—ನೀನೇನೂ ಮಾಡಿಲ್ಲವೇ? ನಾನು ಅಂದಿನಿರುಳು ಸೀತುವೊಡನೆ ಮಾತನಾಡ ಹೋದುದಕ್ಕೆ ನೀನು ಏನನ್ನೋ ತಪ್ಪಾಗಿ ತಿಳುಗೊಂಡಿಲ್ಲವೇ?

ಲೀಲೆ:—ನೀವು ಸೀತುವೊಡನೆ ಮಾತನಾಡ ಹೋಗಿದ್ದೀರಾ! ಜಲಬಾಧೆಯನ್ನು ತೀರಿಸಲು ಹೊರಗೆ ಹೋಗಿದ್ದೇನೆಂದಿರಲ್ಲ!

ನಾನು:—ನೀನೇಕೆ ಮತ್ತೆ ಹೊರಗೆ ಬಂದಿದ್ದುದನ್ನು ಕೇಳಿದರೂ ಸರಿಯಾಗಿ ಹೇಳಲಿಲ್ಲ?

ಲೀಲೆಯು ಮಾತಾಡಲಿಲ್ಲ.

ನಾನು:—ಹೋಗಲಿ ಲೀಲಾ! ಎಲ್ಲವನ್ನೂ ಮರೆತು ಬಿಡು. ಆದರೆ, ನೀನಾದರೂ ಚೆನ್ನಾಗಿ ತಿಳುಕೊಂಡು ನಡೆಯಬೇಕು ನೀನಾಗಿಯೇ ಏನನ್ನಾದರೂ ತಿಳುಕೊಂಡು ದುಡುಕುತ್ತಿರುವೆ. ಅದರಿಂದಲೇ ನಾವೀಗ ಎಂತಹ ಕಷ್ಟಕ್ಕೆ ಗುರಿಯಾಗಿದ್ದೇವೆ ಬಲ್ಲೆಯಾ? ನಾನೇ ನನ್ನ ಗುಟ್ಟನ್ನು ನಿನಗೆ ಹೇಳಬಾರದಿತ್ತು. ನೀನಾದರೂ ಬೇರೆಯವರಿಗೆ ಹೇಳದಿರಬಹುದಿತ್ತಲ್ಲ. ಹೋಗಲಿ, ಆ ನಿನ್ನಮ್ಮನು ಸೀತುವಂತಹ ಹೊರಗಿನ ಕೂಲಿ ಹೆಣ್ಣಿಗೂ ಹೇಳುವುದೆಂದರೆ ಇದಕ್ಕೇನ ಹೇಳಲಿ! ನನ್ನ ಭವಿಷ್ಯವೆಲ್ಲಾ ಹಾಳಾಯಿತು. ಇನ್ನೇನು?

ನಾನು ಹೀಗೆ ಹೇಳುತ್ತಿದ್ದಾಗ ಲೀಲೆಯ ಕಣ್ಣುಗಳಲ್ಲಿ ನೀರೂರ ಹತ್ತಿತು. ಆಕೆಯು ಬಿಕ್ಕಿ ಬಿಕ್ಕಿ ಅಳತೊಡಗಿದಳು, 'ನನ್ನನ್ನು ಕ್ಷಮಿಸಿರಿ. ಇನ್ನೇನೂ ಆಗದೆಂದೆಣಿಸಿದ್ದೆ. ಇನ್ನೇನ ಮಾಡುವಾ?' ಎಂದು ಕಾಲಿನ ಮೇಲೆ ಉರುಳಾಡ ತೊಡಗಿದಳು. ನನಗೆ ಏನೋ ಏನೊ ಅನಿಸಿತು. ನಾನಾಕೆಯನ್ನು ಸಂತೈಸುತ್ತಾ 'ಲೀಲಾ! ಒಟ್ಟಾರೆ ನಮ್ಮ ಅದೃಷ್ಟವು ಚನ್ನಾಗಿಲ್ಲ. ಇಷ್ಟು ತಿಳುಕೋ. ದೇವರ ಇಚ್ಛೆಯಿದ್ದಂತಾಗಲಿ. ಆದರೆ, ಪಾಪಕ್ಕೆ ಪ್ರಾಯ

ಶ್ಚಿತ್ತವನ್ನು ಕೊಡದಿದ್ದಲ್ಲಿ ಆತನ ಪ್ರಪಂಚವು ಉಳಿಯ ಬಹುದೇ? ನಿನ್ನನ್ನೇನ ಕ್ಷಮಿಸಲಿ, ನಿನ್ನನ್ನು ನಾನು ಕ್ಷಮಿಸಬಲ್ಲೆ. ನನ್ನನ್ನು ಮಾತ್ರ ಯಾರೂ ಕ್ಷಮಿಸಲಾರರು.

ಲೀಲೆ:—ಬೇಡ! ಯಾರಾದರೂ ಕ್ಷಮಿಸಲಿ, ನಾವು ದೇವರೊಡನೆ ಬೇಡುವ. ನಮಗೆ ಪ್ರಾಯಶ್ಚಿತ್ತವನ್ನಾತನು ಮುಂದಿನ ಜನ್ಮಕ್ಕೆ ಕೊಡಲಿ. ನಾವೀ ಜನ್ಮದಲ್ಲಿ ಹೀಗೆ ಸುಖವಾಗಿಯೇ ಇರೋಣ.

ನಾನು:—ಲೀಲಾ! ಮಕ್ಕಳಂತೆ ಆಡುತ್ತಿರುವೆ, ಅದೆಲ್ಲಾ ನಮ್ಮ ಕೈಯಲ್ಲಿದೆಯೇ? ಅಲ್ಲದೆ ನನ್ನ ವ್ಯಾಪಾರವೇನೂ ಸಣ್ಣದೇ! ಹಿಂದೆಲ್ಲೋ ಒಂದು ಶ್ಲೋಕವನ್ನುಕೇಳಿದ್ದೆ ಅದೇನೋ...........

ಲೀಲೆ:—ಅದೇನು?

ನಾನು:—ಅದು ನೆನಪಾಗುವುದಿಲ್ಲ ಅದರ ಅರ್ಥವಿಷ್ಟೆ. ಮೂರು ದಿನಗಳಲ್ಲಿ ಇಲ್ಲವೇ ಮೂರು ವರ್ಷಗಳೇ ಹೋಗಲಿ, ಹೆಚ್ಚಾದ ಪುಣ್ಯ-ಪಾಪಗಳಿಗೆ ಈ ಜನ್ಮದಲ್ಲೇ ಫಲವನ್ನುಣ್ಣ ಬೇಕಾಗುವುದಂತೆ ಪ್ರಾಯಃ ನನ್ನ ವಿಷಯದಲ್ಲಿದು ನಿಜವಾಗಲಿಕ್ಕಿದೆ. ಇಲ್ಲವಾದರೆ ಮೊನ್ನೆಯ ವರೆಗೆ ಯಾರಿಗೂ ಅರಿಯದಿದ್ದುದು ಏನೋ ಒಂದು ನೆನಸದೇ ಇದ್ದ ರೀತಿಯಿಂದ ಹೊರಪಟ್ಟಿತಲ್ಲವೇ? ಏನು ವಿಚಿತ್ರ! ಅಂದೇಕೆ ನಾನು ಬೆಳದಿಂಗಳಲ್ಲಿ ಮಲಗಿದೆ. ದೇವತೆಗಳ ಸಾಕ್ಷಿಯು ಸುಳ್ಳಲ್ಲ ಪೂರ್ಣ ಮನಸ್ಸಿನ ಶಾಪವೂ ತಟ್ಟದಿರುವುದಿಲ್ಲ.

ಲೀಲೆ:—ಹೌದು ಆ ಮುದುಕಿಯು ತುಂಬಾ ಶಾಪ ಕೊಡುತ್ತಿದೆಯಂತೆ. ಅದೇನೋ ನಿನ್ನೆ ಅಲ್ಲಿ ಮೂರು ನಾಲ್ಕು ಮಂದಿ ಯಾರೋ ಬಂದಿದ್ದರಂತೆ. ಭಾರೀ ಹೊತ್ತು ಏನೇನೋ ಗುಟ್ಟಾಗಿ ಮಾತನಾಡುತ್ತಿದ್ದರಂತಲ್ಲಾ? ಏನಿದ್ದೀತು? ನಾನು ಅದೆಲ್ಲಾ ನನಗೆ ಗೊತ್ತೆಂದೆ.

---

## ಹನ್ನೊಂದನೆಯ ಪರಿಚ್ಛೇದ

ತುಸು ಹೊತ್ತು ಇಬ್ಬರೂ ಮಾತನಾಡಲಿಲ್ಲ.

ಆ ಮೇಲೆ ಲೀಲೆಯು 'ಸೀತುವು ಒಂದು ರೀತಿಯಾಗಿರುವಳೇಕೆ? ನಿನ್ನೆ ನಾನೇನೋ ಕೇಳಿದ್ದಕ್ಕೆ ಒಂದೂ ಅರಿಯೆನೆಂದಳು. ಅವಳಾ ಕಡೆ ಹೋಗಿದ್ದಳು' ಎಂದಳು.

ನಾನು:—ಅವಳೇಕೆ ಹೋದಳು? ಆ ಕಡೆಗವಳು ಹೋಗಲೇ ಬಾರದೆಂದಿದ್ದೆನಲ್ಲ.

ಲೀಲೆ:—ನಿನ್ನೆ ಮಧ್ಯಾಹ್ನ ಉಂಡು ಹೋದವಳು ಸಂಜೆಗೆ ಸರಿಯಾಗಿ ಬಂದಳು. ಬಂದವಳೂ ಆ ಕಡೆ ಈ ಕಡೆ ತಿರುಗುತ್ತಾ ಏನೇನೋ ಹುಡುಕಾಡುತ್ತಿದ್ದಳು.

ನಾನು:—ಹಾಗೇನು? ಏನೋ ಮಾಟ ನಡೆಸಿರಬೇಕು ಹಾಗಾದರೆ, ಮೊನ್ನೆಯೂ ಒಂದು ರೀತಿಯಾಗಿ ಮಾತನಾಡುತ್ತಿದ್ದಳು. ಅವಳ ವಿನಯ ಅಭಿನಯಗಳೆಲ್ಲಾ ರಕ್ಕೇ.

ಲೀಲೆ:—ಮೊನ್ನೆ ನಿಮಗೆ ಗೊತ್ತಾಗಿಲ್ಲವೇ?

ನಾನು:—ಏನು? ಯಾವಾಗ?

ಲೀಲೆ:—ನೀವು ಆಕೆಯೊಡನೆ ಮಾತನಾಡಿದ ರಾತ್ರೆ ಏನೋ ವಿನೋದ ನಡೆದದೆ.

ನಾನು:—ಏನದು ಹೇಳು.

ಲೀಲೆ:—ಅಂದು ಹೆಬ್ಬಾಗಿಲ ಹೊರಗಾರೋ ತಿರುಗಾಡುತಿದ್ದರು.

ನಾನು:—ಓಹೋ! ಯಾರೋ ಏನು? ನನಗೆ ಗೊತ್ತು.

ಲೀಲೆ:—ಯಾರದು? ಸೀತು... ........

ನಾನು:—ಅವಳಿಗೆ ಬೇಕಾದವರೇ ಇರಲಿ, ಎಷ್ಟು ಹೊತ್ತಿಗೆ ನೀನು ಕಂಡುದು? ಎಲ್ಲಿ ಅಡ್ಡಾಡುತ್ತಿದ್ದನು?

ಲೀಲೆ:—ನಾನು ಕಿಟಕಿಗೆ ಒರಗಿ ನಿಂತಿದ್ದೆ. ಹೊರಗಿನಿಂದೇನೋ ಸಪ್ಪಳಾದಂತೆ ಕೇಳಿಸಿತು. ಕಿಟಕಿಯ ಅರ್ಧ ತೆಗೆದಿದ್ದ ಬಾಗಿಲಲ್ಲಿ ಹೊರಗಿಣಿಕಿ ನೋಡಿದೆ, ಕತ್ತಲೆಯಲ್ಲಿ ಸೀತುವಿನ ಕೋಣೆ ಕಡೆಗೆ ಯಾರೋ ನಡೆದಂತೆ ಆಯಿತು, ಅಷ್ಟರಲ್ಲಿ ಮಾತು ಪೂರೈಸಿ ನೀವು ಹೊರಟದ್ದರಿಂದ ಮುಂದೇನಾಯಿತೆಂದು ನೋಡಲಾಗಲಿಲ್ಲ.

ನಾನು:—ಈಗೆಲ್ಲಾ ತಿಳಿಯಿತು. ಆಕೆಯು ಮುಖವನ್ನು ಸೊಟ್ಟಮಾಡಿಕೊಂಡು ನನ್ನನ್ನು ಬೇಗನೇ ಹೋಗಿರೆಂದುದರ ಅರ್ಥವೂ ಈಗ ತಿಳಿಯಿತು. ನೀನೇಕೆ ಮೊನ್ನೆ ಹೇಳಲಿಲ್ಲ?

ಲೀಲೆ:—ನನಗೊಂದು ವಿಶೇಷವಾಗಿ ಕಂಡು ಬರಲಿಲ್ಲ. ಸೀತುವಿನ ಶೀಲವು ನನಗೆ ಸ್ವಲ್ಪವಾಗಿ ಗೊತ್ತೇ ಇತ್ತು. ನಮಗೆ ಹೇಗೆ ಗಂಟುಬಿದ್ದಳೋ ಬಲು ಜೋರಿನವಳಪ್ಪ!

ನಾನು:—ಆಕೆಗೆ ಗಂಟುಬಿದ್ದಾ ಮನುಷ್ಯನಾದರೂ ಒಳ್ಳೆ ಜಂತುವಲ್ಲ. ಆತನ ಹೆದರಿಕೆಯಿಂದಲೇ ಇವಳು ಅವನ ವಶವಾಗಿರುವಳು.

ಲೀಲೆ:—ಸೀತುವನ್ನು ಹೊರಡಿಸಿ ಬಿಡೋಣವೇ?

ನಾನು:—ಇನ್ನೇನು ಮಾಡಿದರೂ ಪ್ರಯೋಜನವಿಲ್ಲ. ಆ ಬಡ್ಡೀ ಮಗನು ಕುಣಿಸಿದಂತೆಯೇ ಕುಣಿಯತಕ್ಕವಳವಳು, ಹಾಳಾಗಲಿ, ಬಜಾರಿ.

ಲೀಲೆ:—ಹಾಗಾದರೆ ಇನ್ನೇನು ಮಾಡುವ?

ನಾನು:—ಮಾಡುವುದೇನು? ಸಿದ್ದುವು ಹೋಗಿ ಇಂದಿಗಾರು ದಿನಗಳು ಸಂದವು ಇಂದು ನಾಳೆಯಲ್ಲೇ ಬಂದಾನು ಹಾಗೂ ಬಾರದಿದ್ದಲ್ಲಿ ನಾಡದು ಮುಂಜಾನೆ ನಾನೇ ಹೊರಡಬೇಕೆಂದಿರುವೆನು.

ಲೀಲೆ:—ಸಿದ್ದುವನ್ನೆಲ್ಲಿಗೆ ಕಳುಹಿರುವಿರಿ? ನೀವು ಮತ್ತೆಲ್ಲಿಗೆ ಹೊರಡುವುದು?

ನಾನು:—ಎಲ್ಲಿಗೆನಲಿ ಲೀಲಾ! ಇಲ್ಲಿ ಮನಸ್ಸಿಗೆ ಏನೇನೂ ಸಮಾಧಾನವಿಲ್ಲ. ಮತ್ತೇನು ಸಿದ್ದುವನ್ನು ಹುಡುಕಿಕೊಂಡು ಹೋಗುವೆನು.

ಲೀಲೆ:—ಸಿದ್ದುವು ನಾಳೆ ಬಂದರೆ—

ನಾನು:—ಬಂದರೂ ನಾನು ಹೊರಡಲೇ ಬೇಕು.

ಲೀಲೆ:—ಅದೇಕೆ ಮತ್ತೆ? ಬೇಡ, ನೀವಿನ್ನೆಲ್ಲಿಗೂ ಹೊರಡುವುದೇ ಬೇಡ. ನಿಮ್ಮನ್ನು ಹೋಗಗೊಡಲಾರೆ.

ಹುಚ್ಚು ಹುಡುಗಿಗೆ ಬುದ್ಧಿಯಿಲ್ಲವೆಂದಂದುಕೊಂಡೆ. ನಾನಾದರೋ ಹೇಳಿ ಕೇಳದಿದ್ದರೆ, ಹೇಳದೆ ಹೊರಟು ಹೋಗಲೂ ಹವಣಿಸುತ್ತಿದ್ದೇನೆಂಬುದು ಅವಳಿಗೇನು ಗೊತ್ತು ಲೀಲೆಯು 'ನಿಮ್ಮನ್ನು ಹೋಗಗೊಡಲಾರೆ'ನೆಂದು ಎರಡೂ ಕೈಗಳಿಂದ ಬಿಗಿದು ಬಿಟ್ಟಳು. ಅವಳ ಈ ಸರಳತನಕ್ಕೂ ಪ್ರೇಮಕ್ಕೂ ನನ್ನ ಮನವು ಮರುಗಿತು. ಆಗ ನಾನು, ಲೀಲಾ! ತುಸು ಆಲೋಚಿಸು ಎಂದಂದ.

ಲೀಲೆ:—ಏನನ್ನಾಲೋಚಿಸಲಿ?

ನಾನು:—ಅದೃಷ್ಟವಿದ್ದರೆ ಮುಂದೆ ಸುಖವಾಗಿರೋಣ.

ಲೀಲೆ:— ಈಗ ಮತ್ತೆ!

ನಾನು:— ಕೆಲಗಾಲ ಹೇಗಾದರೂ ಇರು. ನಿನಗಾವುದಕ್ಕೂ ಕಡಿಮೆಯಾಗಲಾರದು

ಲೀಲೆ:—ಬೇಡ, ನನ್ನಾಣೆ ಬೇಡ, ನೀವೇ ಇಲ್ಲದಿದ್ದ ಮೇಲೆ ನನಗಿನ್ನಾವುದು ಬೇಕು? ಅಂದೇ ಹೋಗಿ ಹತ್ತು ವರ್ಷಕ್ಕೆ ಬಂದಿರಿ. ನೀವಿನ್ನು ಹೋದರೆ ಎಂದಿಗೆ ಬರುವಿರೋ?

ನಾನು:— ನಿನಗೆ ಬುದ್ಧಿಯಿಲ್ಲ.

ಲೀಲೆ:—ಅದೇನೋ ನಿಜ ಆದರೆ ಇನ್ನು ಮಾಡುವುದೇನು?

ನಾನು:—ಅದನ್ನೇ ನಾನು ಹೇಳುತ್ತಿರುವುದು. ನಿನಗೆ ತಿಳಿಯುವುದಿಲ್ಲವೇ? ಈ ಗೊಂದಲವೆಲ್ಲಾ ಅಡಗುವ ತನಕ ನಾನೆಲ್ಲಾದರೂ– ಹೀಗನ್ನುತ್ತಿರುವಾಗ 'ರುಂ' ಎಂದು ಕಿಟಿಕಿಯಲ್ಲಿ ಬಿರುಗಾಳಿಯು ಬೀಸಿದುವರಿಂದ ಅಲ್ಲಿದ್ದಾ ಮಿನುಗು ದೀಪವು ನೊಂದಿ ಹೋಯಿತು ಲೀಲೆಯು ಬರೇ ಸುಮ್ಮನೆ 'ಬೇಡ, ಬೇಡ'ವೆನ್ನುತ್ತಾ ನನ್ನ ವಕ್ಷದಲ್ಲಿ ಮುಖವನ್ನಿಟ್ಟು ಬಿಕ್ಕಿ ಬಿಕ್ಕಿ ಅಳಹತ್ತಿದಳು ಕೊನೆಗೆ ನಾನು 'ಸುಮ್ಮನೆ ಮರುಗಲೇಕೆ ಲೀಲಾ! ಸಿದ್ದು ಪೂಡನೆ ಮಾತನಾಡದೆ ಯಾವುದನ್ನೂ ನಿರ್ಧರಿಸುವಂತಿಲ್ಲ'ವೆಂದುಸಂತೈಸಿದೆ

---

## ಹನ್ನೆರಡನೆಯ ಪರಿಚ್ಛೇದ

ಸಿದ್ಧನು ಹೋಗಿ ಅಂದಿಗೆ ಏಳು ದಿನಗಳಾಗಿದ್ದುವು. ಆತನೊಡನೆ ಮಾತನಾಡದೆ ನಾನು ಏನನ್ನೂ ನಿರ್ಧರಿಸುವಂತಿಲ್ಲ. ಆತನಿನ್ನೂ ಬರಲಿಲ್ಲವೇಕೆಂದು ಯೋಚಿಸುತ್ತಾ ಮಹಡಿಯ ಮೇಲೆ ಕುಳಿತಿದ್ದೆ.

ಮಧ್ಯಾಹ್ನ ಒಂದು ಘಂಟೆಯ ಸಮಯವಿರಬಹುದು. ಅಷ್ಟು ಹೊತ್ತಿಗೆ ಒಬ್ಬ ನರಸಣ್ಣನು 'ಜಯವಾಗುತ್ತೈತೆ, ಜಯವಾಗುತ್ತೈತೆ' ಎನ್ನುತ್ತಾ ಹೆಬ್ಬಾಗಿಲಲ್ಲಿ ಬಂದು ಒದರತೊಡಗಿದ. ಯೋಚನಾಮಗ್ನನಾಗಿದ್ದ ನಾನು ಎಚ್ಚತ್ತು ಕಿಟಿಕಿಯ ಕಡೆ ಇಣಿಕಿ ನೋಡಿದೆ.

ಬೇಡುವವರಲ್ಲಿ ಶ್ರೀಮಂತನೆಂದರೆ ನರಸಣ್ಣ ತುಸು ಹೊತ್ತು ನಾನು ಮೇಲಿನ ಕಿಟಿಕಿಯಿಂದಲೇ ಇಣಿಕಿ ಆತನನ್ನೇ ನೋಡತೊಡಗಿದೆ. ಆತನೇನನ್ನೋ ಹೇಳುತ್ತಲೇ ಇದ್ದ ನರಸಣ್ಣನು ತನ್ನ ಸ್ವಭಾವದಂತೆ ಕೆಲವು ಒಳ್ಳೆದನ್ನೂ ಕೆಲವು ಕೆಟ್ಟದನ್ನೂ ಒದರಿಬಿಟ್ಟು ಚರ್ಚೆಯಿಲ್ಲದೆ ಭಿಕ್ಷೆಯನ್ನು ಕೊಂಡುಹೋಗತಕ್ಕವನೇ ಅಲ್ಲ. ಹಾಗೆಯೇ ಈತನಾದರೂ

ಕೂಡಲೇ ಹೊರಡುವುದರಲ್ಲಿದ್ದಿಲ್ಲ. ಇನ್ನೂ ಹೇಳಹತ್ತಿದ 'ಜಯವಾಗುತ್ತೈತೆ, ಜಯ ವಾಗುತ್ತೈತೆ, ಈ ಮನೆಯ ಯಜಮಾನರಿಗೆ ಮುಂದೆ ಸಂಕಟ ಪ್ರಸಂಗಗಳಿವೆ. ಸಂಕಟ ವೆಂದರೆ ಬಲು ಸಂಕಟವೇ ಅದು ಕಂಡ್ಯಾ ಮಹರಾಜ' ಹೀಗೆ ಹೇಳಿಬಿಟ್ಟು ನಾಲ್ಕೂ ಕಡೆ ಗಳನ್ನು ನೋಡಿದ, ಅಲ್ಲಿ ಯಾರೂ ಇದ್ದಿಲ್ಲ. ನನಗೆ ಕೇಳಿ ಆಶ್ಚರ್ಯವೆನಿಸಿತು. ಕೂಡಲೇ ನಾನು ಎದ್ದು ಮಹಡಿಯಿಂದ ಕೆಳಗಿಳಿಯಲು ಮೆಟ್ಟಲಿನ ಹತ್ತಿರಬಂದೆ. ಮೆಟ್ಟಲಿನ ಕೆಳಗೆ ಲೀಲೆಯು ಕೆನ್ನೆಗೆ ಕೈಹಿಡಿದು ಕುಳಿತು ನರಸಣ್ಣನ ಮಾತುಗಳನ್ನಾಲಿಸುತ್ತಿದ್ದಳು.

ಅಷ್ಟರಲ್ಲ ನರಸಣ್ಣನು 'ನಡೆದುದರ ನುಡಿಯೇಕೆ? ಗುಡಿಯೊಳಗೆ ಇರಲೇಕೆ? ಮಡದಿ ಮಂಗಳವೇಕೆ? ಕೆಲಗಾಲ ದಶದಿಕ್ಕ ಹಿಡಿಯಲೇ ಬೇಕು ಕಂಡ್ಯಾ ಮಹಾರಾಜ' ಎಂದ. ನನಗೇಕೋ ಹೊಡೆದೆಬ್ಬಿಸಿದಂತಾಯಿತು. ಲೀಲೆಯು ಬಂದು ನನ್ನ ಕೈಯನ್ನು ಹಿಡು ಕೊಂಡು ಮೆಲ್ಲಗೆ 'ಕೇಳಿದಿರಾ?' ಎಂದಳು ಆಗ ನಾನು 'ಅಹುದ. ನಿನ್ನೆ ನಾನು ನಿನಗೆ ಹೇಳುತ್ತಿದ್ದುದನ್ನೇ ಹೇಳುತ್ತಿದ್ದಾನೆ. ನಾನೆಲ್ಲಾದರೂ ಓಡಿಹೋಗಬೇಕೆಂದು ಸ್ಪಷ್ಟವಾಗಿ ಹೇಳಿದನೆಂ'ದೆ ನರಸಣ್ಣನ ಮಾತು ಪೂರಾ ಸುಳ್ಳೇ ಆದರೂ ಅಂದೇಕೋ ನನಗೆ ಎಲ್ಲಾ ಸರಿಯಾಗಿಯೇ ಕಂಡುಬಂದಿತು

ಮರೆಯಲ್ಲೇ ನಿಂತು ಸ್ವಲ್ಪ ಹೊತ್ತು ನರಸಣ್ಣನನ್ನೇ ನೋಡುತ್ತಿದ್ದಂತೆ ಏನೋ ಒಂದು ಹಳೆ ವಿಚಾರವು ಸ್ಮರಣೆಗೆ ಬಂದಂತಾಯಿತು. ಲೀಲೆಯನ್ನಲ್ಲೇ ಬಿಟ್ಟು ಕುತೂಹಲ ದಿಂದ ಹೆಬ್ಬಾಗಿಲಿಗೆ ಹೋಗಿ ಕುಳಿತೆ. ನರಸಣ್ಣನು ನನ್ನನ್ನೇ ತುಸು ಸಿಗಾ ಇಟ್ಟು ನೋಡಿ ತನ್ನ ಮಾತುಗಳನ್ನು ಅಲ್ಲೇ ನಿಲ್ಲಿಸಿದ ನಾನಾಗ 'ನಾಕಯ್ಯ, ನಿನಗೇನು ಬೇಕೆಂ'ದೆ.

ಅದಕ್ಕಾತನು 'ನರಸಣ್ಣನಿಗೆ ಹಕ್ಕಿಯು ನುಡಿಯುತ್ತಿರುವುದು. ಆತನಾಗಿ ಕೇಳುವು ದಾದರೆ ಜೋಡು ದೋತ್ರ, ಜೋಡು ಫಲ, ಪಡಿಯಕ್ಕಿ, ತಾಂಬೂಲ, ಇನ್ನು ಕಾಂಚನವೂ ಇದ್ದರೆ ಚಿನ್ನದ ಕಲಶವಿಟ್ಟಂತೆ ಕಂಡ್ಯಾ ಮಹರಾಜ' ಎಂದ. ಆಗ ನಾನು 'ಎಲ್ಲರೂ ನಿನಗೆ ಹೀಗೆ ಕೊಟ್ಟರೆ ನೀನು ಹೊತ್ತುಕೊಂಡು ಹೋಗುವುದು ಹೇಗೆ ಮಹಾರಾಜ' ಎಂದೆ.

ಅಷ್ಟರಲ್ಲಿ ನರಸಣ್ಣನು ಸ್ವಲ್ಪ ನಕ್ಕು ಸಹಜ ಸ್ವರದಿಂದ 'ಆದರೆ, ನನಗಾವುದೂ ಬೇಡಯ್ಯ ಮಧ್ಯಾಹ್ನ ಹೊತ್ತು, ಸಿದ್ಧವಾದ ಊಟವನ್ನೇ ಹಾಕಿಸಿಬಿಡಿ' ಎಂದ. ನನಗೇಕೊ ಆಗಿನಿಂದಲೂ ಒಂದು ಸಂದೇಹವು ಬಾಧಿಸುತ್ತಿತ್ತು. ನಾನು ಕುತೂಹಲದಿಂದ ಕೂಡಲೇ 'ಹಾಗೇ ಆಗಲಿ' ಎಂದು ಹೇಳಿ ಆತನಿಗೆ ನೀರನ್ನು ತಂದುಕೊಡಲು ಹೇಳಿದೆ. ನರಸಣ್ಣನು ತನ್ನ ವಿಶೇಷ ಉಡುಪುಗಳನ್ನೆಲ್ಲಾ ತೆಗೆದಿಟ್ಟು ಕಾಲು ತೊಳೆದುಕೊಂಡು ಹಿತ್ತಲುಕಡೆಗೆ ಬಂದು ಕುಳಿತನು.

ಅಷ್ಟರಲ್ಲಿ ಆತನಿಗೆ ಉಣ್ಣಲು ಬಡಿಸಿಟ್ಟಿದ್ದರು. ನಾನು ಕುತೂಹಲದಿಂದ ಆತನನ್ನೇ ನೋಡುತ್ತಿದ್ದಂತೆ ಆತನಾದರೂ ಆಗಾಗ ನನ್ನನ್ನು ನೋಡುತ್ತಿದ್ದ. ಆಗ ನಾನು 'ನರಸಣ್ಣನ ಊರಾವುದು?' ಎಂದು ಕೇಳಿದೆ.

ಅದಕ್ಕಾತನು 'ಯಾವ ಊರಾದರೇನು? ಜನರ ಗುರುತೇ ಇಲ್ಲವಾದರೆ' ಎಂದು ಹೇಳಲು ನನ್ನ ಸಂದೇಹವು ತಕ್ಕಮಟ್ಟಿಗಿಳಿಯಿತು. ಹಾ! ತಿಳಿಯಿತೆಂದೆಂದುಕೊಂಡು 'ನರಸಣ್ಣ!

ಸಿಟ್ಟು ಮಾಡಬೇಡ ಕಂಡೆಯಾ, ನಿನ್ನನ್ನು ಮೊದಲು ಕಂಡಾಗಲೇ ನನಗೆ ಸಂದೇಹವು ಮೂಡಿತ್ತು. ನಿನ್ನನ್ನು ಕಂಡು ಎಷ್ಟು ಸಮಯವು ಕಳೆಯಿತು ನೋಡು. ಯಾವ ಸಂಗತಿಯೂ ಇಲ್ಲದೆ ಆಕಸ್ಮಿಕವಾಗಿ ಒಬ್ಬರನ್ನು ಸಹಜವಾಗಿ ಕಂಡರೂ ಸಂದೇಹವಾಗುವುದು. ನೀನಂತೂ ನರಸಣ್ಣನಾಗಿ ಬಿಟ್ಟದ್ದೆ. ಇರಲಿ, ರಾಜು! ಇದೇನು ನಿನ್ನ ಸಮಾಚಾರ? ನೀನಾವಾಗ ಊರಿಗೆ ಬಂದಿದ್ದೆ. ಇದೇನೀ ವೇಷ?' ಎಂದು ಕೇಳಿದೆ.

ರಾಜು:—ರಾಯರೇ! ಒಂದು ಅತಿ ಆವಶ್ಯಕ ಕೆಲಸಕ್ಕಾಗಿ ಇಲ್ಲಿಗೆಂದೇ ಬಂದೆ. ಅಲ್ಲದೆ ಈ ಹಾಳು ವೃತ್ತಿಯನ್ನು ಹಿಡಿದೆನೆಂದೆಣಿಸಿದಿರಾ? ಇಲ್ಲಿ ಬೇಡ, ನೀವೀಗ ಒಳಗೆ ಹೋಗಿ. ಈಗ ಬಂದೆನೆಂದ. ರಾಜುವು ಇಷ್ಟೆಂದ ಕೂಡಲೇ ನನ್ನ ಕುತೂಹಲವು ಇಮ್ಮಡಿಸಿತು. ಅದಾವ ವಿಚಾರವೋ ಏನೆಲ್ಲ ಇದೆಯೋ ಎಂದೆಂದುಕೊಂಡು ಆತನು ಉಂಡು ಬರುವನಕ ನನಗೆ ಒಂದು ಯುಗವೇ ದಾಟುತ್ತಿರುವಂತೆ ಕಂಡಿತು. ರಾಜುವು ಉಂಡು ಬರುವಾಗ ಆತನ ಮುಖದಲ್ಲಿ ಆ ಮೊದಲಿನ ಗೆಲವಿದ್ದಿಲ್ಲ. ಆತನು ತುಂಬಾ ಕಳವಳಗೊಂಡಿದ್ದಂತೆ ಕಂಡಿತು. ನನಗಾದರೂ ಭಯಾಶ್ಚರ್ಯಗಳು ಒಡಮೂಡಿದುವು. ಕೂಡಲೇ ನಾವಿಬ್ಬರೂ ಮಹಡಿ ಯನ್ನು ಹತ್ತಿದೆವು.

---

## ಹದಿಮೂರನೆಯ ಪರಿಚ್ಛೇದ

ಆಗ ನಾನು 'ರಾಜು! ಸಮಾಚಾರವೇನು? ಬೇಗನೆ ಹೇಳೆಂ'ದೆ. ಆದಕ್ಕೆ ರಾಜುವು ನನ್ನನ್ನು ಕುಳಿತುಕೊಳ್ಳುವಂತೆ ಸಂಜ್ಞೆಮಾಡಿ, ಅತ್ತಿತ್ತ ನೋಡಿಕೊಂಡು ಮೆಲ್ಲಗೆ ಮಾತಿಗೆ ಮೊದಲುಮಾಡಿದ.

ರಾಜು:—ಸಮಾಚಾರವೇನೆಂದು ಹೇಳಲಿ. ನಿಮ್ಮ ಮೇಲೆ ಭಯಂಕರ ಪ್ರಸಂಗವೆದ್ದದೆ.

ನಾನು.—ನನಗೂ ಹಾಗೆನಿಸಿದೆ. ಆದಕ್ಕೇನ ಮಾಡಬೇಕೆನ್ನುವೆ? ನೀನು ಊರಿಗೆ ಬಂದುದಾವಾಗ?

ರಾಜು:—ಇಂದು ಬಂದವನೇ ಈ ವೇಷದಿಂದೀ ಕಡೆ ಬಂದೆ.

ನಾನು.—ಹಾಗಾದರೆ, ಸಿದ್ದನು ಅಲ್ಲಿಗೆ ಬಂದುದನ್ನು ಬಲ್ಲೆ?

ರಾಜು:—ಸಿದ್ದನು ಅಲ್ಲಿಗೆ ಬಂದುದರಿಂದಲೇ ನಾನಿಲ್ಲಿಗೆ ಬರಬೇಕಾಯಿತು.

ನಾನು:—ಅದೇಕೆ? ಆತನೇಕೆ ಹಿಂದಿರುಗಲಿಲ್ಲ?

ರಾಜು:—ಆತನನ್ನು ಬಂಧಿಸಿದ್ದಾರೆ.

ನಾನು:—ಅಯ್ಯೋ! ಯಾರು ಬಂಧಿಸಿದರು? ಎಲ್ಲವನ್ನೂ ಬೇಗನೇ ಹೇಳು.

ರಾಜು:—ಏನೋ ಗುಪ್ತಾನುಸಂಧಾನವು ತುಂಬಾ ನಡೆದದೆ. ಸಿದ್ದನು ಅಲ್ಲಿಗೆ ಬಂದ ಮರುದಿನ ಆಕಸ್ಮಿಕವಾಗಿ ಒಬ್ಬ ಮನುಷ್ಯನು ನಮ್ಮ ಮನೆಗೆ ಬಂದು ಸಿದ್ದನನ್ನು ಬೊಟ್ಟಿಟ್ಟು 'ಇವನೇ' ಎಂದ ನಮಗೆಲ್ಲರಿಗೂ ಆಶ್ಚರ್ಯವಾಯಿತು. ಕೂಡಲೇ ಪೋಲೀಸಿ ನವರು ಆತನನ್ನು ಕರಕೊಂಡುಹೋದರು. 'ಅಯ್ಯೋ! ನಾನೇನ ಮಾಡಿದೆ, ನನ್ನನ್ನೆಲ್ಲಿ ಗೊಯ್ಯುವಿರೆಂ'ದು ಕೂಗುತ್ತಿದ್ದಾತನ ಗೋಳನ್ನು ಕಂಡು ನಮಗೆ ಸಾಕುಬೇಕಾಯಿತು.

ನಾನು:—ಆ ತೋರಿಸಿದವನನ್ನು ನೀನು ಬಲ್ಲೆಯಾ?

ರಾಜು:—ನಾನು ಅದೇ ಆತನನ್ನು ಮೊದಲು ನೋಡಿದುದು ಆದರೆ, ಮನೆಹೆಂಗುಸರು ಅದಕ್ಕೆ ಹಿಂದಿನ ದಿನ ದೇವಸ್ಥಾನದಲ್ಲಿ ಆತನನ್ನು ನೋಡಿದ್ದರಂತೆ. ಆತನು ತನ್ನಷ್ಟಕ್ಕೆ ತಾನೇ ಏನೇನೋ ಹರಟೆಹೊಡೆಯುತ್ತಿದ್ದನಂತೆ. ಆತನ ಆಳಿಯನೊಬ್ಬನು ಬಹಳಕಾಲ ಅಲ್ಲಿ ಶಾಂತಿಯನ್ನು ನಡೆಸುತ್ತಿದ್ದು ತುಂಬಾ ಸಂಪಾದಿಸಿದ್ದನೆಂದು ಹೇಳುತ್ತಿದ್ದನಂತೆ. ಆ ಮಾತುಗಳಿಂದ ಆತನೊಬ್ಬ ವಂಚಕನೇ ಆಗಿರಬೇಕೆಂದು ಹೆಂಗುಸರು ಹೇಳುತ್ತಿರುವರು.

ನಾನು:— ಹೋಗಲಿ. ಆತನು ಹೇಗಿದ್ದನು? ಯಾವ ಜಾತಿಯವನು?

ರಾಜು:—ಆತನು ಬ್ರಾಹ್ಮಣ. ಬೆಳ್ಳಗಿನ ಗಿಡ್ಡು ದೇಹ. ಸಾಧಾರಣ ೪೫ ವಯಸ್ಸಿರಬಹುದು. ಆತನಾರು? ತಿಳಿಯಿತೇ?

ನಾನು:—ಅದಾರೋ ನಾನೂ ನಿಶ್ಚಯವಾಗಿ ತಿಳಿಯಲಾರೆ. ಆದರೆ ಊಹಿಸಬಲ್ಲೆ. ಇರಲಿ, ಅಂತೂ ಇದರಿಂದೆಲ್ಲಾ ನೀನು ಏನನ್ನು ತಿಳಿದೆ?

ರಾಜು:—ಯಾರೋ ನಮ್ಮ ಗುಪ್ತವಿಚಾರಗಳನ್ನು ಬಯಲಿಗೆಳೆದು ಸಂಕಟದಲ್ಲಿ ಕೆಡವಲು ಅನುಸಂಧಾನ ನಡೆಸುತ್ತಿರುವರು. ಬಹಳ ಮಟ್ಟಿಗೆ ಅವರು ಕೃತಕಾರ್ಯರಾದಂತೆಯೇ ಕಾಣುತ್ತದೆ. ಇಲ್ಲವಾದರೆ ನಮ್ಮ ಮನೆಗೆ ನೆಂಟನಂತೆ ಬಂದಿರುವ ಸಿದ್ದನನ್ನು ಬಂಧಿಸಲು ಧೈರ್ಯವೇನು?

ನಾನು:—ಸಿದ್ದನನ್ನು ಬಂಧಿಸುವಾಗ ನೀವೇನೂ ಹೇಳಿಲ್ಲವೇ?

ರಾಜು:—ಒಂದೂ ಉಪಯೋಗವಾಗಿಲ್ಲ. ಅವರಲ್ಲೊಬ್ಬನು 'ಹೆದರಬೇಡಿ. ಏನೋ ಸಂದೇಹದಿಂದ ಹಿಡಿಯಲೇ ಬೇಕಾಗಿದೆ. ಫೈಸಲ್ ಆದ ಕೂಡಲೇ ಹಿಂತಿರುಗಿಸುವೆ'ವೆಂದ. ಸಿದ್ದನು ಬಂದಿದ್ದ ಸಮಾಚಾರವನ್ನೆಲ್ಲಾ ನನಗೆ ಮೊದಲೇ ತಿಳುಹಿದ್ದನಾದುದರಿಂದ ಕೂಡಲೇ ನಾನು ಈ ಕಡೆ ಹೊರಟು ಬಂದೆ.

ನಾನು:—ನೀನು ಹೊರಟುದರಲ್ಲಿ ಸಂದೇಹಕ್ಕೆಡೆಯಿಲ್ಲವೇ?

ರಾಜು:—ಇದ್ದರೂ ಚಿಂತಿಲ್ಲ. ನಾನಂತೂ ಇಲ್ಲಿಗೆ ಇಷ್ಟರಲ್ಲೇ ತಲುಪಿದೆನಷ್ಟೆ. ಇನ್ನು ಒಂದು ಕ್ಷಣವಾದರೂ ಹೊತ್ತು ಕಳೆಯಕೂಡದು. ನಾನೂ ಹೆಚ್ಚು ಹೊತ್ತು ಇಲ್ಲಿ ನಿಲ್ಲಲಾರೆ. ನೀವಿಂದು........ಎನ್ನುತ್ತಾ ರಾಜುವು ಇನ್ನೂ ತುಸು ಪಿಸುಮಾತನಾಡಿ 'ಹೀಗೇ ಸೈ, ಬೇರೆ ಉಪಾಯವಿಲ್ಲ, ಹೆಚ್ಚಿಗೆ ಯೋಚಿಸಬೇಡಿ' ಎಂದೆನ್ನುತ್ತಾ ಏಳತೊಡಗಿದ. ನಾನೂ ಉಪಾಯವಿಲ್ಲದೆ ಬೀಳ್ಕೊಟ್ಟೆ. ರಾಜುವು ಸರ್ರನೆ ಕೆಳಗಿಳಿದು ತನ್ನ ಉಡುಪುಗಳನ್ನೆಲ್ಲಾ ಹಾಕಿಕೊಂಡು ಹೊರಟೇಹೋದ.

ರಾಜುವು ಏನೋ ನಿರ್ಧಾರವನ್ನು ಹೇಳಿಹೋದರೂ ನನಗೆ ಬುದ್ಧಿಯು ಸ್ಥಿರವಾಗಲೊಲ್ಲದು. ಕೂಡಲೇ ಎದ್ದು ಕೆಳಗೆ ಹೊರಟೆ. ಅಷ್ಟರಲ್ಲಿ ಲೀಲೆಯು ಬಂದು 'ಸಮಾಚಾರವೇನು, ಹೇಳಿ? ಆತನಾರು?' ಎಂದಳು.

ಆಕೆಗೇನು ಸಮಾಧಾನವನ್ನು ಹೇಳಿದೆನೆಂದೂ ಈಗ ಗೊತ್ತಾಗುವುದಿಲ್ಲ. 'ಸಿದ್ದನನ್ನು ಪೋಲೀಸರು ಕೊಂಡುಹೋದರಂತೆ' ಎಂದೆ. ಲೀಲೆಯು ಕೇಳಿ ಕಂಗಾಲಾದಳು.

# ಹದಿನಾಲ್ಕನೆಯ ಪರಿಚ್ಛೇದ

ಪ್ರಿಯ ಪಾಠಕ! ಆಗುವುದನ್ನು ತಪ್ಪಿಸಲೂ ಆಗದುದನ್ನು ಮಾಡಲೂ ಯಾರೂ ಸಮರ್ಥರಲ್ಲ. ಎಷ್ಟೆಷ್ಟೋ ಉಪಾಯಗಳನ್ನು ಚಿಂತಿಸಿ ಪ್ರಯೋಜನವಿಲ್ಲೆಂದು ತೆಪ್ಪಗೆ ಕುಳಿತಿದ್ದ ನನಗೆ ನನ್ನ ಇಂದಿನ ಉಪಾಯವಾದರೂ ಹೇಗೆ ಪರಿಣಮಿಸುವುದೋ ಎಂದು ತುಂಬಾ ಸಂದೇಹವಿತ್ತು.

ಎಲ್ಲೆಲ್ಲೂ ಕಗ್ಗತ್ತಲೆಯು ತುಂಬಿತ್ತು. ಸಾಧಾರಣ ನಡುವಿರುಳಾಗಿರಬಹುದು. ಮನೆಯಲ್ಲಿ ಎಲ್ಲರೂ ನಿದ್ರಿಸಿದ್ದರು. ಲೀಲೆಯಾದರೂ ಅಂದು ನಿಜವಾಗಿಯೇ ನಿದ್ದೆ ಹೋಗಿದ್ದಳೆಂದು ತಿಳಿಯಿತು. ಎಲ್ಲವೂ ಅನುಕೂಲವಾಗಿವೆಯೆಂದು ತಿಳಿದು ಮೆಲ್ಲನೆ ಮಲಗುವ ಕೊಠಡಿಯಿಂದ ಹೊರಬಿದ್ದ ಅಂಗಳದಲ್ಲಿ ನಿಂತೊಮ್ಮೆ ಸುತ್ತಲೂ ನೋಡಿದೆ. ಆಹಾ! ನಾನೆಲ್ಲಿಗೆ ಹೊರಟಿರುವೆನು? ನನ್ನ ಇಲ್ಲಿಯ ಋಣವು ತೀರಿತೇ? ಲೀಲಾ! ನಿನ್ನ ಅದೃಷ್ಟವು ಈ ಜನ್ಮದಲ್ಲೇ ವಕ್ರವಾಗಿದೆ ನಾನೇನ ಮಾಡಲಿ ಎಂದಂದುಕೊಂಡೆ ಕಣ್ಣುಗಳಲ್ಲಿ ತುಸು ನೀರೂರತೊಡಗಿತು. ದೀರ್ಘ ಶ್ವಾಸವೊಂದು ತನ್ನಂತೆ ಹೊರಟುಹೋಯಿತು.

ತೋಟದ ಕಡೆ ಬಾಗಿಲನ್ನು ಮೆಲ್ಲಗೆ ತೆರೆದು ಸದ್ದಿಲ್ಲದೆ ತೋಟಕ್ಕೆ ಇಳಿದುಹೊರಟೆ. ಅಲ್ಲಿ ಇನ್ನಷ್ಟು ಕತ್ತಲೆಯು ತುಂಬಿದ್ದರೂ ಅಭ್ಯಾಸದಿಂದ ಹೇಗೋ ಹಾಗೆ ಮುಂದುವರಿದೆ. ಸ್ವಲ್ಪ ದೂರದಲ್ಲಿ ಸುಯ್ಯೆಂದೊಂದು ಶಬ್ದವಾಯಿತು ದರಗೆಲೆಗಳ ಮೇಲೆ ಏನೋ ಹರಿದಾಡುತ್ತಿದ್ದಂತೆ ತೋರಿತು.

ನಾನಾವುದನ್ನೂ ಗಮನಿಸದೆ ತೋಟದಿಂದ ಹೊರಬಿದ್ದು ಚಿಕ್ಕ ಚಿಕ್ಕ ಪೊದರುಗಳ ಗುಡ್ಡೆಯೊಂದನ್ನು ಹತ್ತಿದೆ ಅಷ್ಟರಲ್ಲಿ ತೋಟದ ಕಡೆಯಿಂದ ಇನ್ನೊಂದು ಶಬ್ದವು ಕೇಳಿಸಿತು. ದೂರದಲ್ಲಿ ಯಾರೋ ವೇಗವಾಗಿ ನಡೆಯುತ್ತಿದ್ದಂತೆ ಕಂಡಿತು. ಮನಸ್ಸಿನಲ್ಲೊಮ್ಮೆ ಭಯವಾಯಿತು. ಮೈಯು ಜುಮ್ಮೆಂದು ಬೆವರಿದಂತಾಯಿತು. ಆದರೂ ನಾನು ಬರಿಗೈಯಲ್ಲಿ ಹೊರಟಿಲ್ಲ ಧೈರ್ಯವನ್ನು ತಂದುಕೊಂಡು ಆ ಕತ್ತಲೆಯಲ್ಲೇ ಆದರೂ ಆದಷ್ಟು ವೇಗವಾಗಿ ಸಾಗತೊಡಗಿದ

ಗುಡ್ಡೆಯು ಸಾಧಾರಣ ಒಂದು ಮೈಲು ವಿಸ್ತೀರ್ಣವಿತ್ತು ನಾನು ಅಡ್ಡದಾರಿಯಿಂದ ಹೊರಟಿದ್ದೆ. ನನ್ನ ಸರಿಯಾದ ದಾರಿಯು ಗುಡ್ಡೆಯ ಆಚೆಮಗ್ಗುಲಿಗಿತ್ತು. ಅಲ್ಲಿಗಂತೂ ತಲುಪಿದೆನಾದರೆ ನಾನು ಗೆದ್ದೆ. ಅಲ್ಲಿಂದ ಎರಡೇ ಘಂಟೆಗಳಲ್ಲಿ ನಾನು ರೈಲ್ವೇ ಸ್ಟೇಶನನ್ನು ತಲುಪಬಹುದಾಗಿತ್ತು

ನಾನು ಹೀಗೆಣಿಸುತ್ತಾ ಪೊದೆಗಳ ಮರೆಯಲ್ಲಿ ಗುಡ್ಡೆಯ ಅರ್ಧಭಾಗವನ್ನೇ ದಾಟಿರಬಹುದು. ಅಷ್ಟರಲ್ಲಿ ಅಲ್ಲೂ ಒಂದು ಏನೋ ಓಡುತ್ತಿರುವಂತೆ ಕಂಡಿತು. ಒಂದು ಕ್ಷಣ ಸುತ್ತಲೂ ನೋಡಿ ಮುಂದಡಿಯಿಡುವಷ್ಟರಲ್ಲಿ ತುಸು ದೂರ ನನ್ನೆದುರಿಗಿರುವೊಂದು ಪೊದರಿನಿಂದ ಏನೋ ಕಪ್ಪಾಗಿ ನನ್ನ ಕಡೆಗೇ ಹೊರಟು ಬರುವಂತೆ ಕಂಡಿತು. ನನ್ನ ಎದೆಯು ಜುಮ್ಮೆಂದು ಗಟ್ಟಿಯಾಗಿ ಬಡಿಯಹತ್ತಿತು. ನಡಿಗೆಯು ಸ್ವಲ್ಪ ಮಂದವಾಯಿತು. ಚೂರಿಯನ್ನು ಸಿದ್ಧವಾಗಿ ಹಿಡುಕೊಂಡೆ.

ಆ ಕವ್ವಾಗಿ ಕಂಡ ವ್ಯಕ್ತಿಯು ಒಬ್ಬ ಮನುಷ್ಯನೇ ಆಗಿದ್ದು ಆತನು ನನ್ನ ಉದ್ದೇಶ ವಾಗಿಯೇ ಅಲ್ಲಿ ಆ ಸ್ಥಿತಿಯಲ್ಲಿ ಬಂದಿರುವನೆಂದು ಭಾವಿಸಿದೆ. ಅಷ್ಟರಲ್ಲಿ ಸರಕ್ಕೆಂದಿತು. ಆತನ ಮಗ್ಗುಲಿಗೇ ಇದ್ದೊಂದು ಪೊದರಿನ ಕೆಲವು ಟೊಂಗೆಗಳು ಪುಡಿಪುಡಿಯಾಗಿ ಕೆಳಗೆ ಬಿದ್ದವು. ನಿಜವಾಗಿ ಆತನು ನನ್ನನ್ನಣಕಿಸುತ್ತಿದ್ದನು. ತನ್ನಲ್ಲೂ ಕತ್ತಿಯಿದೆಯೆಂದು ತೋರಿಸುವು ದಕ್ಕಾಗಿಯೇ ಆತನು ಪೊದರನ್ನು ಸವರಿರಬೇಕೆಂದೆಣಿಸಿದೆ.

ಆದರೆ ಹೀಗೆ ನನ್ನ ಬೆನ್ನು ಹತ್ತಿದ್ದಾತನಾರು? ಆತನ ಉದ್ದೇಶವೇನು? ಆತನು ಏಕಾಕಿಯೇ? ಏಕಾಕಿಯು ಹೀಗೆ ನಡುವಿರುಳು ಒಬ್ಬ ಮನುಷ್ಯನ ಬೆನ್ನು ಹತ್ತಿಯಾನೇ? ಎಂದು ಮುಂತಾಗಿ ವಿಚಾರಗಳು ನನ್ನನ್ನಾವರಿಸಲು ಮುಂದೇನು ಮಾಡಲೆಂದು ಕ್ಷಣಕಾಲ ಅಲ್ಲೇ ನಿಂತು ಬಿಟ್ಟೆ.

ನಾನು ಸ್ತಬ್ಧನಾಗಿ ನಿಂತ ಮರುಕ್ಷಣವೇ ಕಠೋರವಾದ ಒಂದು ಸಿಳ್ಳು ಕೇಳಿಸಿತು. ಒಡನೆ ಮೂರು-ನಾಲ್ಕು ಮಂದಿ ಕರೇ ವ್ಯಕ್ತಿಗಳು ನನ್ನನ್ನಾವರಿಸಿದವು ಮುಂದುಗಡೆ ಬರು ತ್ತಿದ್ದ ವ್ಯಕ್ತಿಯು 'ನಿಲ್ಲು, ನೀನಾರು?' ಎಂದನು. ನಾನು ಒಮ್ಮೆ ಕಂಗಾಲಾದೆನಾದರೂ ತಕ್ಕಷ್ಟು ಧೈರ್ಯವನ್ನು ತಂದುಕೊಂಡು, 'ನೀವಾರೆಂದು ನನ್ನ ಬೆನ್ನು ಹತ್ತಿದ್ದೀರಿ' ಎಂದು ಕೇಳುವಷ್ಟರಲ್ಲೇ ಇನ್ನೊಬ್ಬನು 'ನಾಕುಮಾಡು, ನೀನೊಬ್ಬ ಪಕ್ಕಾ ಕಳ್ಳನೆಂದೇ ನಿನ್ನ ಬೆನ್ನು ಹತ್ತಿದ್ದೇವೆ' ಎಂದು ಹಿಂದುಗಡೆಯಿಂದ ನನ್ನನ್ನು ಬಲವಾಗಿ ಹಿಡಿದ. ಕೂಡಲೇ ನಾನು ಕತ್ತಿಯನ್ನು ಬೀಸಿದೆನಾದರೂ ಆದನ್ನೇ ಒಬ್ಬನು ಅಮುಮಿಬಿಟ್ಟುದರಿಂದ ಇನ್ನೊಬ್ಬನು ನನ್ನ ಕತ್ತಿಯನ್ನು ಸೆಳೆಕೊಂಡುಬಿಟ್ಟು 'ಸುಮ್ಮನೆ ನಮ್ಮೊಡನೆ ಬಾ' ಎಂದ.

ಆಗ ನಾನು 'ನಿಮ್ಮೊಡನೆ ಬರಲಡ್ಡಿಯಿಲ್ಲ. ಆದರೆ ನೀವಾರನ್ನೋ ಹುಡುಕುತ್ತಿದ್ದು ಯಾರನ್ನೋ ಬಂಧಿಸಿರುವಿರಿ ನನಗೂ ನಿಮಗೂ ಏನೂ ಸಂಬಂಧವಿಲ್ಲ'ವೆಂದೆ ಅದಕ್ಕೆ ಅವರಲ್ಲೊಬ್ಬನು 'ಆಹಾ! ಚೆನ್ನಾಗಿ ಬುದ್ಧಿ ಹೇಳುವೆ, ನಿನ್ನನ್ನೇ ಹುಡುಕುತ್ತಿದ್ದೆವಯ್ಯ, ಆದರೆ ನಿನಗೂ ನಮಗೂ ನೆಂಟುತನವೇನೂ ಇರುವುದಿಲ್ಲ ನಿಜ. ಆದರೆ, ನಿನಗೂ ಮರಿರಾಯ ನಿಗೂ ಏನಾದರೂ ಇದ್ದೀತೇ? ಎಂದ

ಎಲ್ಲವೂ ವಿಪರೀತ! ಆತನದೇ ಕಾರ್ಯವಿದೆಂದಂದುಕೊಂಡು 'ಮರಿರಾಯನೆಂಬ ಹೆಸ ರನ್ನು ಮಾತ್ರ ಕೇಳಿದ್ದೇನೆ, ಬೇರೇನನ್ನೂ ಕಾಣೆ'ನೆಂದು ನಾನು ಹೇಳಲು 'ನಾಳೆ ವಿಚಾರಣೆ ಯಿಂದ ಹೆಚ್ಚಿನ ವಿಚಾರವೆಲ್ಲಾ ತಿಳಿಯುವುದೆಂದು' ಹೇಳುತ್ತಾ ಅವರು ನನ್ನನ್ನು ನಡುವೆ ಯಿರಿಸಿಕೊಂಡು ಎಲ್ಲಗೋ ಹೊರಟರು

## ಹದಿನೈದನೆಯ ಪರಿಚ್ಛೇದ

ಮರುದಿನ ನ್ಯಾಯಸ್ಥಾನದಲ್ಲಿ ನನ್ನನ್ನು ತಂದು ನಿಲ್ಲಿಸಿವರು. ಇಡೀ ನ್ಯಾಯಸ್ಥಾನ ದಲ್ಲಿ ನನ್ನವರೆಂಬವರಾರೂ, ಅಲ್ಲಿ ಕಾಣಲಿಲ್ಲ. ಅಷ್ಟರಲ್ಲಿ ಒಬ್ಬ ವಕೀಲನು ನ್ಯಾಯಾಧೀಶನ ಮುಂದೆ ಬಂದು, 'ಏನೋನೋ ಹೇಳತೊಡಗಿದನು ನ್ಯಾಯಾಧೀಶನು ನನ್ನನ್ನು ಕುರಿತು ಕೈದಿಯೇ! ನಿನ್ನಮೇಲೆ ಕೊಲೆಯ ಆರೋಪವಿದೆ' ಎಂದನು.

ನಾನು:—ಧರ್ಮಾವತಾರ! ಅಷ್ಟು ದೊಡ್ಡ ಆರೋಪ! ಆರೋಪಿಸುವವರಾರು? ಅದಕ್ಕೆ ಆಧಾರವೇನು?

ನ್ಯಾಯಾಧೀಶನು 'ತುಂಬಾ ಆಧಾರಗಳು ದೊರೆತಿವೆ. ಅದೀಗಿಲ್ಲೇ ನಿನಗೆ ತಿಳುಹಿಸ ಲಾಗುವುದು' ಎಂದು ಹೇಳಿ ವಕೀಲನಿಗೇನೋ ಹೇಳಿದನು. ಆಗ ವಕೀಲನು ತನ್ನೊಂದಿ ಗಿದ್ದೊಬ್ಬ ವ್ಯಕ್ತಿಯನ್ನು ತೋರಿಸಿ 'ಇವರನ್ನು ಬಲ್ಲೆಯಾ?' ಎಂದು ಕೇಳಿದನು. ನಾನು 'ಇಲ್ಲ'ವೆಂದೆ. ತಿರುಗಿ ವಕೀಲನು 'ಮರಿರಾವನ್ನು ಕೇಳಿಲ್ಲವೇ?' ಎಂದನು.

ನನಗೆ ಮರಿರಾಯನ ಹೆಸರು ಮೊದಲಿನಿಂದಲೂ ಗೊತ್ತು. ಆತನು ಬಹಳ ಸಮಯ ದಿಂದ ನನ್ನ ಮೇಲೆ ಕಣ್ಣಿಟ್ಟಿದ್ದು ನನ್ನ ರಹಸ್ಯವನ್ನು ಶೋಧಿಸುತ್ತಿದ್ದನು. ನನ್ನ ಇಂದಿನ ಎಲ್ಲಾ ಅನರ್ಥಕ್ಕೂ ಆತನೇ ಕಾರಣನಾಗಿದ್ದು ನನ್ನ ಜನ್ಮಾಂತರದ ಕಡುವೈರಿಯೆಂದರೆ ಮರಿರಾಯನಾಗಿದ್ದನು. ಖಂಡಿತವಾಗಿಯೂ ನನಗೆ ಇವನಿಂದ ನಿಸ್ತಾರವಿಲ್ಲ, ಏ ಪಾಪೀ ಎಂದಂದುಕೊಂಡು ವಕೀಲನ ಮಾತಿಗೆ 'ಹೆಸರನ್ನು ಕೇಳಿದ್ದೆ'ನೆಂದೆ! ವಕೀಲನು 'ಇವರೀಗ ನಿನ್ನ ತಪ್ಪನ್ನು ಸ್ಥಾಪಿಸುವ'ರೆಂದನು.

ಕೂಡಲೇ ಮರಿರಾಯನು ಮುಂದೆ ಬಂದು 'ಧರ್ಮಾವತಾರ! ಈತನ ಕ್ರೂರಕೃತ್ಯಕ್ಕೆ ಈಗ ಬಹಳ ಸಮಯವು ಸಂದಿದೆಯಾದರೂ ಸದ್ಯಕ್ಕೆ ಬೇಕಾದಷ್ಟು ಆಧಾರಗಳೂ ಸಾಕ್ಷಿಗಳೂ ದೊರೆತಿವೆ. ಇವನೂ, ನೆರೆಯ ಇವನ ಮಿತ್ರನೂ ಕೂಡಿ ಹಣ ಸಂಪಾದನೆಗೆಂದು ಕೇರಳಕ್ಕೆ ಹೋದರು. ಇವನ ಮಿತ್ರನೊಂದು ಕಡೆ ಹೇರಳವಾದ ಹಣವನ್ನು ಸಂಪಾದಿಸಿದನು. ಆದರೆ, ಇವನು ದುರ್ವ್ಯಸನಿಯಾಗಿ ಊರೂರು ಅಲೆಯುತ್ತಿದ್ದನು. ಹೀಗೆ ೧೦ ವರ್ಷಗಳೇ ಸಂದವು. ಕೊನೆಗೊಂದು ದಿನ ಇವನು ಆ ಮಿತ್ರನಲ್ಲಿಗೆ ಬಂದು ತಾವು ಊರು ಬಿಟ್ಟು ಬಹಳ ವರ್ಷ ಗಳಾದುದರಿಂದ ಇನ್ನು ಹೊರಡುವುದೆಂದು ನಿರ್ಣಯಿಸಿದನು. ಸರಳ ಸ್ವಭಾವದ ಇವನ ಮಿತ್ರನು ಇವನ ಗರೀಬತನಕ್ಕಾಗಿ ಮರುಗಿ ಅನೇಕ ಉಡುಗೊರೆ-ಉಚಿತಗಳಿಂದಿವನನ್ನು ಪುರಸ್ಕರಿಸಿ ಇಷ್ಟಮಿತ್ರರಿಂದ ಬೀಳ್ಕೊಂಡು ಇಬ್ಬರೂ ಊರಿಗೆ ಹೊರಟರು. ಹಾಯ, ಈ ಕೃತಘ್ನ ಮಿತ್ರದ್ರೋಹಿಯ ವಿಷಮಯ ಹೃದಯವನ್ನಾ ಸರಳ ಯುವಕನು ಅರಿಯದೆ ಪ್ರಾಣಕ್ಕೆರವಾದನು.' ಹೀಗೆನ್ನುತ್ತಿರುವಾಗ ಮರಿರಾಯನ ಕಣ್ಣುಗಳು ನೆನೆದುವು. ನ್ಯಾಯಾ ಧೀಶನು ವಕೀಲನೊಡನೆ ಅದೇನೆಂದು ಕೇಳಲು ವಕೀಲನು 'ಕೊಲೆಗೀಡಾದ ಯುವಕನು ಇವರ ಸೋದರಳಿಯ'ನೆಂದನು.

ಮರಿರಾಯನು ಕಣ್ಣುಗಳನ್ನೊರಸಿಕೊಂಡು ಮುಂದೆ ಹೇಳತೊಡಗಿದನು. ಕೇಳೋ ಣಾಗಲಿ, ಮುಂದಾಗಿ ಆಲೋಚಿಸಿಕೊಂಡಿದ್ದ ಈ ದ್ರೋಹಿಯು ನಿರಾಯುಧನಾದಾತನನ್ನು ಅವೇಳೆಯಲ್ಲಿ ಎಲ್ಲೋ ಅಡ್ಡದಾರಿಯಲ್ಲಿ ಕರಕೊಂಡು ಹೋಗಿ ಕೊಲೆಮಾಡಿ ಬಿಟ್ಟನು. ಆತನೊಡನೆಯೇ ಇದ್ದ ಚಿನ್ನಾಭರಣ ಹಾಗೂ ಹಣದ ಪೆಟ್ಟಿಗೆಯನ್ನು ತನ್ನದೆಂದು ಹೇಳಿ ಊರಿನ ಜನರನ್ನು ವಂಚಿಸಿ, ಏನೂ ಅರಿಯದವನಂತಿದ್ದನು. ಆ ಸಮಯ ಇವನು ನಡೆ ಸಿರುವ ಈ ಕೆಲವು ಪತ್ರವ್ಯವಹಾರವೂ, ಈ ತಂತಿವಾರ್ತೆಯೂ ಒಂದಕ್ಕೊಂದು ಸರಿ ವಿರುದ್ಧ ವಾಗಿದ್ದು ಇವನ ಮೋಸಗಾರಿಕೆಯನ್ನು ಸ್ಪಷ್ಟಗೊಳಿಸುತ್ತಿವೆ. ಇವನ ಮಿತ್ರನು ನದಿಯಲ್ಲಿ

ಬಿದ್ದು ಹೋದನೆಂದು ತನ್ನ ಕಡೆಯ ಒಬ್ಬ ಮನುಷ್ಯನಿಂದ ಈತನು ಊರಿಗೆ ಕೊಡಿಸಿದ ತಂತಿಯಿದು. ಆದರೆ, ಇವರು ಹೊರಟು ಬಂದ, ಊರಿಗೆ ಬರೆಯಲ್ಪಟ್ಟ ಈ ಪತ್ರದಲ್ಲ ತಾವು ಕ್ರೂರರಾದ ದರೋಡೆಗಾರರ ಕೈಗೆ ಸಿಕ್ಕಿಬಿದ್ದೆವೆಂದು ಬರೆದಿದೆ. ಇಂತಹ ವಿಚಾರಗಳೆಷ್ಟೋ ಇರುತ್ತವೆ. ಸಂದೇಹಗೊಂಡ ನಾನು ಇವರಿಬ್ಬರೂ ಇದ್ದ ಊರುಗಳಿಗೆ ಹೋಗಿ ಇವರ ಸಂಸರ್ಗಿಗಳಾದ ಸ್ತ್ರೀಜನರಿಂದಲೂ ಹಲವು ಸಂಗತಿಗಳನ್ನು ಸಂಗ್ರಹಿಸಿದ್ದೇನೆ ಇವನ ಮಿತ್ರನು ಏನೂ ಸಂಪಾದಿಸದೆ ಬಿಕಾರಿಯೂ ರೋಗಿಷ್ಠನೂ ಆಗಿದ್ದನೆಂದು ಈತನು ಊರಿನಲ್ಲಿ ತಿಳಿಸಿರುವನು. ಆದರೆ ಇಲ್ಲೀ ಇನ್ನು ವಿಚಾರವಾಗಲಿರುವ ಸ್ತ್ರೀಸಾಕ್ಷಿಯಿಂದ ಆತನು ಸಾಧಾರಣ ೧೦ ಸಾವಿರ ರೂಪಾಯಿಗಳ ಬೆಲೆ ಬಾಳುವ ಸಂಪತ್ತಿನಿಂದ ಹೊರಟಿದ್ದನೆಂದು ತಿಳಿಯಲಿದೆ. ಧರ್ಮಾವತಾರ! ಈತನು ಮೊದಲಿನಿಂದಲೂ ವಂಚಿಸುತ್ತಲೇ ಇದ್ದನು.

ಆದರೂ ಮೊನ್ನೆ ಮೊನ್ನೆ ಇವನ ಮನೆಯಿಂದಲೇ ಈ ರಹಸ್ಯವು ಹೊರ ಬೀಳುವನಕವೂ ನನಗೆ ನಿಜಸ್ಥಿತಿಯು ತಿಳಿದಿಲ್ಲ. ಆ ಮೇಲೆಯೇ ನಾನು ಸರಿಯಾದ ಶೋಧನೆಸಿ ಈ ಮೇಲ್ಕಂಡ ಆಧಾರಗಳನ್ನು ಸಂಗ್ರಹಿಸಿದೆನು ಅಲ್ಲದೆ ಈಗ ಒಂದು ತಿಂಗಳಿಂದಲೂ ಇವನ ಮನೆಯ ರಹಸ್ಯಗಳನ್ನು ತಿಳಿಯಲು ಉಪಾಯಗಳನ್ನು ಕಲ್ಪಿಸಿದ್ದೆ. ನಿನ್ನೆ ರಾತ್ರೆ ಇವನು ಆಕಸ್ಮಿಕವಾಗಿ ಓಡಿ ಹೋಗಲು ಯತ್ನಿಸಿದ್ದರಿಂದ ನಡುದಾರಿಯಲ್ಲೇ ಇವನನ್ನು ಹಿಡಿಯಲು ಪಂಚಿಕೆಯನ್ನು ಮಾಡಬೇಕಾಯಿತು

ನನ್ನೀ ಯಾವತ್ತು ವಿಷಯಗಳ ಕುರಿತು ಇನ್ನು ಹಲವು ಸಾಕ್ಷಿಗಳನ್ನೂ ಸಂಗ್ರಹಿಸಿ ರುವೆನು. ಅವನ ಕಡೆಯ ಆ ಮನುಷ್ಯರಿಂದಲೂ ಬಲಾತ್ಕಾರಪ್ರದರ್ಶನದಿಂದ ಕೆಲವು ವಿಷಯಗಳನ್ನು ತಿಳಿಯಬಹುದು'

ಮುರಿರಾಯನು ಇಷ್ಟು ಹೇಳಿ, ಆ ಕಡೆ ಈ ಕಡೆ ಪಲವರನ್ನು ತೋರಿಸಿದನು ಕೋರ್ಟಿನಲ್ಲಿ ಪಿಸು ಮಾತುಗಳಿಗಾರಂಭವಾಯಿತು. ನಾನು ತಲೆಯೆತ್ತಿ ನೋಡಿದ. ನಮ್ಮ ಕೇರಳದ ಸಹವಾಸಿಗಳಾಗಿದ್ದ ಹಲವರು ಅಲ್ಲಿದ್ದರು. ಅಲ್ಲದೆ ನನ್ನ ಮನೆಯ ಸೀತುವೂ ಸಿದ್ದನೂ ನಿನ್ನೆ ಕೇರಳದಿಂದ ಬಂದಿದ್ದ ರಾಜುವೂ ಕೂಡ ಅಲ್ಲಿದ್ದುದನ್ನು ಕಂಡು ನನಗೆ ಆಶ್ಚರ್ಯವೆನಿಸಿತು. ಆಹಾ! ಇವರೆಲ್ಲರೂ ದುಡ್ಡಿನ ಆಸೆಗೋ ಶಿಕ್ಷೆಯ ಭಯಕ್ಕಾಗಿಯೋ ನನ್ನ ರಹಸ್ಯಗಳನ್ನು ಹೇಳಿಯೇಬಿಡುವರು ನನ್ನೀಪಾಯ ಶೂನ್ಯನಾಗಿ ಮಾಡಿದ ಕರ್ಮಕ್ಕೆ ತಕ್ಕ ಫಲವನ್ನುಣ್ಣಲು ಮೃತ್ಯುದ್ವಾರದಲ್ಲಿ ಹೋಗಿಕುಳಿತಿರುವ ನನ್ನನ್ನು ಪ್ರಪಂಚವೇ ಅಣಕಿಸುತ್ತಿರುವಂತೆ ಕಂಡಿತು

ಆ ಮೇಲೆ ಅಲ್ಲಿ ಹಲವರ ವಿಚಾರಣೆಗಳು ನಡೆದುವು ಎಲ್ಲವೂ ನನಗೆ ಪ್ರತಿಕೂಲ ಗಳಾಗಿದ್ದವೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಆ ದಿನ ನನ್ನನ್ನು ಅಲ್ಲಿಂದಾಗ ಕರ ಕೊಂಡು ಹೋದರು ಮರುದಿನ ತಿರುಗಿ ನ್ಯಾಯಾಧೀಶನ ಮುಂದೆ ತಂದು ನಿಲ್ಲಿಸಿದರು. ಸ್ವಲ್ಪ ಹೊತ್ತು ಏನೇನೋ ಮಾತುಗಳು ನಡದ ಮೇಲೆ ನ್ಯಾಯಾಧೀಶನು ನನ್ನನ್ನು ಕುರಿತು ತನ್ನ ನಿರ್ಣಯವನ್ನು ಈ ರೀತಿ ಓದಿಹೇಳಿದನು

'ಅಪರಾಧಿ! ನೀನು ಕೊಲೆಪಾತಕಿಯೆಂಬುದಕ್ಕೆ ಬೇಕಾದಷ್ಟು ಆಧಾರಗಳುದೊರೆತಿವೆ. ಅಲ್ಲದೆ, ಆ ಆಧಾರಗಳಲ್ಲೊಂದನ್ನೂ ನಿರಾಕರಿಸುವರೆ ನಿನ್ನಲ್ಲಿ ಪ್ರತಿ ಆಧಾರಗಳಿರುವುದಿಲ್ಲ. ಆದುದರಿಂದ ನೀನು ಮರಣ ದಂಡನೆಗೆ ಯೋಗ್ಯನಿರುತ್ತಿ' ಎಂದೆನಲು ನನಗೆ ಕೇಳಿ ಮೈಯೆಲ್ಲಾ ಬೆವರಿ ತಲೆಯು ತಿರುಗಿದಂತಾಯಿತು. ನ್ಯಾಯಾಧೀಶನು ತಿರುಗಿ ಹೇಳತೊಡಗಿದನು.

'ಆದರೆ, ನಿನ್ನೀ ಕೊಲೆಪಾತಕಕ್ಕೆ ಆರು ವರ್ಷಗಳು ದಾಟಿದ್ದು, ಅದನ್ನು ಪ್ರತ್ಯಕ್ಷ ಕಂಡವರಿಲ್ಲವಾದುದರಿಂದ ಮರಣದಂಡನೆಯು ಬದಲಾಗಿ ೧೪ ವರ್ಷ ದ್ವೀಪಾಂತರ ವಾಸವು ವಿಧಿಸಲಾಗಿದೆ' ಎಂದೋದಿ ನಿಲ್ಲಿಸಿದನು.

ಕೂಡಲೇ ನನ್ನನ್ನು ಇಲ್ಲಿಗೆ ತಂದಿರಿಸಿದರು. ನನ್ನ ಕುರಿತು ಮೇಲಿನ ನಿರ್ಣಯವಾಗಿ ಇಂದಿಗೆ ಮೂರು ದಿನಗಳಾದುವು ಆಪ್ತಜನರಿದ್ದರೆ ಮಾತನಾಡಿ ಹೋಗಲೆಂದು ಇನ್ನೊಂದು ದಿನ ಇಲ್ಲಿರಿಸುವರು ನಾಳೆಗೆ ನಾನು ಹೊರಟುಹೋಗುವೆನು.

ಇದೀಗ ನನ್ನ ಪಾಪಿಯ ಚರಿತ್ರೆಯು. ಕೊನೆಗಾದರೂ ದೈವವು ನನಗೆ ತಕ್ಕುದನ್ನಾಚರಿಸಿತು. ಭಗವಂತಾ! ನಿನ್ನ ಕಣ್ಣುಗಳನ್ನು ಮರೆಯಿಸುವವನಾವನು? ಸೂರ್ಯ-ಚಂದ್ರರೆ ನಿನ್ನ ಕಣ್ಣುಗಳು. ಮನುಷ್ಯ ಮಾತ್ರನು ಮೊನ್ನೆಯವರೆಗೂ ತಿಳಿಯದಿದ್ದ ರಹಸ್ಯವನ್ನು ನಿನ್ನ ಕಣ್ಣೇ ಕಂಡುಹಿಡಿಯಿತು. ಆಗಲಿ, ಪಾಪಿಗಳಿಗೆ ಶಿಕ್ಷೆಯು ಬೇಡವೇ, ಬೇಡವಾದರ ಪ್ರಪಂಚವು ಉಳಿಯಲಾರದು

ಪಾರಕವರಾ! ನಿಮ್ಮನ್ನು ದಣಿಸಿದೆ. ಪಾಪಿಗಳಲ್ಲಿ ನಿಮಗೆ ಕರುಣೆಯಿರುವುದೇ? ಹಾಗಿದ್ದಲ್ಲಿ ನನ್ನೊಂದು ಪ್ರಾರ್ಥನೆಯನ್ನು ಸಲ್ಲಿಸಲಾರಿರಾ? ಲೀಲೆಯನ್ನೊಮ್ಮೆ ಇಲ್ಲಿಗೆ ಬರಗೊಡಲಾರಿರಾ? ಇನ್ನೂ ಬರಲಿಲ್ಲವಲ್ಲ. ಅವಳು ಇಷ್ಟರಲ್ಲೇ ಆತ್ಮಘಾತವನ್ನು ಮಾಡಿಕೊಂಡಿರಬಹುದೇ? ಅಯ್ಯೋ! ಬುದ್ಧಿಯಿಲ್ಲದ ಹೆಣ್ಣೆ, ಇಷ್ಟೂ ಆದುದು ಅವಳಿಂದ. ಆದರೆ ಇನ್ನೇನು ಮಾಡಲಾಪಳು ನನ್ನನ್ನು ನಾಳೆಯೇ ದ್ವೀಪಾಂತರಕ್ಕೆ ಕಳುಹುವರು ಪ್ರಿಯ ಪಾರಕ! ಅದರೊಳಗೆ ಲೀಲೆಯನ್ನೊಮ್ಮೆ ಇಲ್ಲಿಗೆ ಕಳುಹಿಸಲಾರಿರಾ? ಪಾಪಿಗಳಲ್ಲಿ ನಿಮಗೆ ಕರುಣೆಯಿಲ್ಲವೇ? ಭಗವಂತಾ! ನಿನಗೂ ನನ್ನಲ್ಲಿ ಕರುಣೆಯಿಲ್ಲವೇ?"

## ಉಳಿದುದು

ಮರಿರಾಯನು ಏನೋ ವ್ಯವಹಾರ ನಡೆಸಿ ಕೇಶವನ ಸಂಪತ್ತಿನ ಕೆಲವಂಶವನ್ನು ಪ್ಪುತನ ಕುಟುಂಬಕ್ಕೆ ಕೊಡಿಸಿದ್ದನು.

ಕೇಶವನು ೧೪ ವರ್ಷಗಳ ದ್ವೀಪಾಂತರ ವಾಸವನ್ನನುಭವಿಸಿ ಊರಿಗೆ ಬಂದು ಶಾಂತ ರೀತಿಯಿಂದ ಲೀಲೆಯೊಡನೆ ಸಂಸಾರವನ್ನು ಮಾಡಹತ್ತಿದನು. ಲೀಲೆಯು ತನ್ನ ಪತಿಯು ಲೋಕಾಂತರದಿಂದಲೇ ಬಂದನೆಂಬಷ್ಟು ಸಂತೋಷಗೊಂಡಳಂತೆ ಕೇಶವನು ಈ ಹೊನ್ನು, ಹೆಣ್ಣು, ಮಣ್ಣುಗಳಿಂದುಂಟಾಗುವ ಅನರ್ಥಗಳನ್ನು ಸ್ವಾನುಭವದಿಂದ ಚಿಂತಿಸಿ ಜಿಹಾನೆಪಟ್ಟು ತನ್ನ ಉಳಿದ ಆಯುಷ್ಯವನ್ನು ತುಂಬಾ ಪಾರಮಾರ್ಥಿಕರೀತಿಯಿಂದ ನೀಗಹತ್ತಿದನು

**ಸಂಪಾದಕ**

